SHRI RAMTATVA

KANNADA-ENGLISH

# TRANSLATION SERIES

## BOOK III

ಕನ್ನಡ-ಇಂಗ್ಲಿಷ

# ಭಾಷಾಂತರ ಪಾಠಮಾಲೆ

## ಮೂರನೇ ಪುಸ್ತಕ





*PUBLISHED BY*

**GOVINDARAO ABAJIRAO SAVANT, BELGAUM.**



1971 ] • [ Price 1-75

# SHRI RAMTATVA

# TRANSLATION SERIES

## KANNADA-ENGLISH

## BOOK III

BY

SANGAPPA MALLAPPA ANKLE,

SEVENTEENTH EDITION 2000 COPIES.

*Revised, enlarged and brought up to date under the General Superintendence of the Publisher.*

1971.





PUBLISHED BY

**Govindrao Abajirao Savant, Belgaum.**

# ಪೀಠಿಕೆ.

# PREFACE.

ಭಾಷಾಂತರಪಾಠಮಾಲೆಯ ಮೊದಲನೇ ಎರಡನೇ ಪುಸ್ತಕಗಳನ್ನು ರಚಿಸಿದ ಪದ್ಧತಿಯಂತೆ ಈ ಮೂರನೇ ಪುಸ್ತಕವು ರಚಿಸಲ್ಪಟ್ಟಿದೆ. ಕೃದಂತಗಳು, ಸಂಕೇತಾರ್ಥ ಮುಂತಾದ ಹಲವು ಪ್ರಕರಣಗಳನ್ನು ಬಿಟ್ಟು, ಬಹುತರವಾಗಿ ಉಳಿದ ಯಾವತ್ತು ವ್ಯಾಕರಣ ವಿಷಯಗಳನ್ನು ಇದರಲ್ಲಿ ತಂದಿದೆ. ಪ್ರತಿ ಒಂದು ಪಾಠದಲ್ಲಿ ಇಂಗ್ಲಿಷ ಹಾಗು ಕನ್ನಡ ಭಾಷೆಗಳೊಳಗಿನ ಹಲವು ಚಮತ್ಕಾರವುಳ್ಳ ರೂಢಿಯ ಮಾತುಗಳು ಬಂದವೆ. ಗ್ರಂಥವು ಬೆಳೆದು ಕ್ರಯವು ಹೆಚ್ಚಾದರೆ, ಬಡ ವಿದ್ಯಾರ್ಥಿಗಳಿಗೆ ಕೊಳ್ಳಲಿಕ್ಕೆ ಜಡಬಿದ್ದೀತೆಂದು ತಿಳಿದು, ತುಸು ಪಾಠಗಳನ್ನು ಹಾಕಿ ಸ್ವಲ್ಪ ಸ್ಥಳದಲ್ಲಿ ಬಹಳ ವಿಷಯಗಳನ್ನು ತಂದದೆ. ಇದಲ್ಲದೆ ಉಚ್ಚಾರಗಳನ್ನೂ ಪ್ರಶ್ನೆಗಳನ್ನೂ ಕೊಟ್ಟಿಲ್ಲ. ಈ ಪುಸ್ತಕವನ್ನು ಮನಸ್ಸುಗೊಟ್ಟು ಕಲಿತರೆ, ವಿದ್ಯಾರ್ಥಿಗಳಿಗೆ ಇಂಗ್ಲಿಷ ಭಾಷೆಯ ಜ್ಞಾನವು ತಕ್ಕಮಟ್ಟಿಗೆ ಚನ್ನಾಗಿ ಆಗುವದೆಂದು ತೋರುತ್ತದೆ.

ಈ ಪುಸ್ತಕದ ಸಂಬಂಧದಿಂದಾದರೂ ಕನ್ನಡ ವ್ಹರ್ನಾಕ್ಯುಲರ ಕಮಿಟಿಯೊಳಗಿನ ಕೆಲವು ಸದ್ಗೃಹಸ್ಥರು ಹಲವು ಉಪಯುಕ್ತವಾದ ಸೂಚನೆಗಳನ್ನು ಮಾಡಿದ್ದರಿಂದ ನಾನು ಅವರ ಉಪಕಾರ ನೆನಿಸುತ್ತೇನೆ.

ಬೆಳಗಾಂವಿ.　　　　ಸ. ಮ. ಅಂಕಲೆ.

# ಮುನ್ನುಡಿ.



ಈ ಆವೃತ್ತಿಯಲ್ಲಿ ಹಿಂದಿನ ಆವೃತ್ತಿಯೊಳಗಿನ ತಪ್ಪುಗಳನ್ನು ತಿದ್ದಿ, ಅನಾವಶ್ಯಕವಾದ ಟಿಪ್ಪಣಿ ತೆಗೆದುಹಾಕಿ ಕೆಲವು ಕಡೆಯಲ್ಲಿ ಸಮನಾದ ಅರ್ಥವುಳ್ಳ ಶಬ್ದಗಳಲ್ಲಿರುವ ನಿಜವಾದ ಭೇದವನ್ನು ಕುರಿತು ಟಿಪ್ಪಣಿಗಳನ್ನು ಹೆಚ್ಚಿಗೆ ಕೊಟ್ಟಿದೆ. ಶಬ್ದಸಂಗ್ರಹದೊಳಗಿನ ಶಬ್ದಗಳಿಗೆ ಒಂದಕ್ಕಿಂತ ಹೆಚ್ಚು ಅರ್ಥಗಳಿದ್ದಲ್ಲಿ ಅವುಗಳ ಹಿಂದೆ ಸಣ್ಣ ಅಂಕಿ ಹಾಕಿ, ಭಿನ್ನವಾದ ಅರ್ಥಗಳನ್ನು ವಿಂಗಡಿಸಿ ತೋರಿಸಿರುತ್ತದೆ. ಮತ್ತು ಅಲ್ಲಲ್ಲಿ ಕೆಲವು ಹೆಚ್ಚುಕಡಿಮೆಗಳನ್ನು ಮಾಡಿದೆ. ಹೀಗೆ ವಿದ್ಯಾರ್ಥಿಗಳಿಗೆ ಚನ್ನಾಗಿ ಸಹಾಯವಾಗುವಂತೆ ಕೈಲಾದ ಮಟ್ಟಿಗೆ ಪ್ರಯತ್ನ ಮಾಡಿದೆ.

ಈ ಅಂಕಲೆಕೃತ ಭಾಷಾಂತರಪಾಠಮಾಲೆಯಲ್ಲಿ ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಕೆಲ ಶಬ್ದಗಳ ಅರ್ಥವು ವಿಶಾಲ ಮೈಸೂರಿನ ಎಲ್ಲ ಭಾಗಗಳಲ್ಲಿಯ ಜನಸಾಮಾನ್ಯಕ್ಕೆ ಸುಲಭವಾಗಿ ಆಗುವದಿಲ್ಲವಾಗಿ ಕೆಲ ಓದುಗರು ಸೂಚಿಸಿರುವದರಿಂದ ಈ ಪರಿಷ್ಕೃತ ಪ್ರತಿಗಳಲ್ಲಿ ಅವಶ್ಯವಿದ್ದಲ್ಲಿ ಕೆಲ ತಿದ್ದುಪಡೆ ಮಾಡಲಾಗಿದೆ. ಮೂಲ ಪ್ರತಿಗಳಲ್ಲಿಯ ವ್ಯಾಕರಣ ಭಾಗದಲ್ಲಿ ಯಾವ ಬದಲಾವಣೆ-ತಿದ್ದುಪಡೆ ಮಾಡುವ ಅವಶ್ಯಕತೆ ಇನ್ನೂ ಉಂಟಾಗದೆ ಇರುವದರಿಂದ ಯಾವ ತಿದ್ದುಪಡೆಯನ್ನೂ ಮಾಡಿಲ್ಲ. ವರ್ತಮಾನಪತ್ರ-ಮಾಸಿಕಗಳಲ್ಲಿ ಮೇಲಿಂದ ಮೇಲೆ ಇಂಗ್ಲೀಷಿನ ಬಗೆಗೆ ಪ್ರಕಟವಾಗುತ್ತಿರುವ ಲೇಖಗಳಿಂದ ಓದುಗರನೇಕರಿಗೆ ವಿಶೇಷತಃ ಶಿಕ್ಷಕ ಬಂಧುಗಳಿಗೆ ಇಂಗ್ಲೀಷಿನ-ಭವಿತವ್ಯದ-ಅಸ್ತಿತ್ವದ ಬಗ್ಗೆ ಅನುಮಾನ ಉಂಟಾಗಿರುವದರಿಂದ ಆ ಬಗ್ಗೆ ತಜ್ಞರ ಸ್ಪಷ್ಟ ಮತವೇನಿರುವದೆಂಬುದನ್ನು ಸಹ ಓದುಗರೆದುರಿಗೆ ಇಡಬೇಕೆಂಬುದಾಗಿ ಸೂಚನೆ ಬಂದುದರಿಂದ ಮುನ್ನುಡಿಯಲ್ಲಿ ಈ ಅಂಶದ ಬಗ್ಗೆ ಕೆಲ ಮಾತುಗಳನ್ನು ಹೇಳಲಾಗಿದೆ. ಶಿಕ್ಷಕ ಬಂಧುಗಳನೇಕರು ಇಂಗ್ಲೀಷನ್ನು ಪ್ರಾಥಮಿಕ ಶಾಲೆಯ ಎಳೆಮಕ್ಕಳಿಗೆ ಸುಲಭವಾಗಿ ಪರಿಣಾಮಕಾರಕವಾಗಿ ಕಲಿಸುವ ಆಧುನಿಕ ಪದ್ಧತಿಗಳ ಬಗ್ಗೆ ಕೆಲ ಸೂಚನೆಗಳನ್ನು ಮುನ್ನುಡಿಯಲ್ಲಿ ಕೊಡಬೇಕೆಂದು ಸೂಚಿಸಿರುವದರಿಂದ ಆ ಬಗ್ಗೆ ಕೆಲ ಸೂಚನೆಗಳನ್ನು ಕೊಟ್ಟಿದೆ. ಈಗಾಗಲೇ ಮೈಸೂರ ವಿದ್ಯಾ ಇಲಾಖೆಯವರು ಪ್ರಾಥಮಿಕ ಶಾಲೆಯ V, VI, ಮತ್ತು VII ನೆಯ ತರಗತಿಯ ಮಕ್ಕಳಿಗೆ ಇಂಗ್ಲೀಷ ಕಲಿಸುವ ಬಗ್ಗೆ ಶಿಕ್ಷಕ ಬಂಧುಗಳಿಗೆ ಮಾರ್ಗದರ್ಶಕ ಗ್ರಂಥವೊಂದನ್ನು ವಿದ್ವಾಂಸರಿಂದ ಬರೆಯಿಸಿ, ಎಲ್ಲ ಶಾಲೆಗಳಿಗೆ ಅವನ್ನು ಪೂರೈಸಿದ್ದಾರೆ. ( Vide Teachers' Guide book English Language ) ಅದರಲ್ಲಿ ಇಂಗ್ಲಿಷ ಭಾಷೆಯನ್ನು ಕಲಿಸುವಲ್ಲಿ ಬಳಕೆಯಲ್ಲಿದ್ದ ಅತ್ಯಾಧುನಿಕ ಪದ್ಧತಿಗಳ ಬಗ್ಗೆ ವಿಸ್ತೃತವಾಗಿ ಸಾಕಷ್ಟು ಮಾರ್ಗದರ್ಶನವನ್ನು ಮಾಡಲಾಗಿದೆ. ಈ ಬಗ್ಗೆ ಸಹ ಕೆಲ ಸಾಮಾನ್ಯ ಮಾತುಗಳನ್ನು ಹೇಳಲಾಗಿದೆ.

ಮೂಲ ಪ್ರತಿಗಳಲ್ಲಿ ಭಾಷಾಂತರಕ್ಕಾಗಿ ಕೊಟ್ಟ ಕೆಲ ಮಾತುಗಳನ್ನು ಸ್ವತಂತ್ರ ಭಾರತದ ಗೌರವಕ್ಕೆ, ಸ್ವಾಭಿಮಾನಕ್ಕೆ ಧಕ್ಕೆ ತರುವಂಥವಿದ್ದುದರಿಂದ ಅವನ್ನು ತೆಗೆದು ಹಾಕಲಾಗಿದೆ. ಮೂಲ ಪ್ರತಿಗಳಲ್ಲಿಯ ಮುದ್ರಣ ದೋಷಗಳ ( Printers' mistakes ) ನ್ನು ಸಹ ತಿದ್ದಲಾಗಿದೆ. ಕಣ್ಣು ತಪ್ಪಿ ಇನ್ನೂ ಕೆಲ ದೋಷಗಳಿರಬಹುದು. ಮಹನೀಯರು ಅವುಗಳನ್ನು ಪ್ರಕಾಶಕರ ಗಮನಕ್ಕೆ ತಂದುದಾದರೆ ಅವನ್ನು ಶೀಘ್ರವಾಗಿ ತಿದ್ದುವದಲ್ಲದೆ ತಪ್ಪುಗಳನ್ನು ತೋರಿಸಿ ಕೊಟ್ಟ ಬಗ್ಗೆ ಕೃತಜ್ಞತೆ ವ್ಯಕ್ತ ಮಾಡಲಾಗುವದು.

ಶಿಕ್ಷಕ ಬಂಧುಗಳೂ ಶಿಕ್ಷಣಾಭಿಮಾನಿಗಳಾದ ನಾಗರಿಕರೂ ಈ ಮೊದಲು ಈ ಪುಸ್ತ ಮಾಲಿಗೆ ಉತ್ತೇಜನವಿತ್ತಂತೆ ಈ ಪರಿಷ್ಕೃತಮಾಲೆಗೂ ಉತ್ತೇಜನ ಕೊಡಬೇಕಾಗಿ ಅಗ್ರಹ ವಿನಂತಿ.

ಆಂಗ್ಲ ಭಾಷೆಯು ನಮ್ಮ ಜೀವನದ-ಸಂಸ್ಕೃತಿಯ ಹಾಸುಹೊಕ್ಕಾಗಿ ಇನ್ನೂ ಎಷ್ಟು ಕಾಲ ಉಳಿಯಬಲ್ಲದೆಂಬುದನ್ನು ಈಗಲೇ ಹೇಳಲು ಸಾಧ್ಯವಿಲ್ಲ. ರಾಜಕೀಯ, ಸಾಮಾಜಿ ಮತ್ತು ಶೈಕ್ಷಣಿಕ ಹಿನ್ನೆಲೆಯಲ್ಲಿ ಇದನ್ನು ವಿಮರ್ಶಿಸಿದಾಗ ಇಂಗ್ಲೀಷು ಇನ್ನೂ ದೇಶದಲ್ಲಿ ಉಳಿಯುವದೆಂಬುದರಲ್ಲಿ ಸಂಶಯವಿಲ್ಲ. ಈ ಸಂದರ್ಭದಲ್ಲಿ ಕೇಂದ್ರದ ಮಾನ್ಯ ಶಿಕ್ಷಣ ಸಚಿವರು ತಾ॥ 31—1—1966 ರಂದು ಮದ್ರಾಸಿನಲ್ಲಿ ಮಾಡಿದ ತಮ್ಮ ಭಾಷಣವೊಂದರಲ್ಲಿ "English would continue to be the Associated Official Language along with Hindi unless and until Non Hindi States agreed to Hindi becoming the sole official language" ಎಂದು ಅಪ್ಪಣೆ ಮಾಡಿದ್ದಾರೆ. ಮುಂದುವರಿದು ಅವರು "He attatched the greatest importance to the study of English which must continue even when Hindi became the sole official Language".

English was the Language of international trade & commerce and of science & technology and it would be suicidel to throw away that asset" (Indian Express of 1-2-66 Page 9) ಎಂದು ವಿಧಿಸಿದ್ದಾರೆ.

ಭೌತಿಕ ಮತ್ತು ಇನ್ನಿತರ ಶಾಸ್ತ್ರೀಯ ಜ್ಞಾನವು ವಾಯುವೇಗದಿಂದ ಪ್ರಗತಿ ಹೊಂದು ತ್ತಿದೆ. ಸಂಶೋಧಕರು ಹೊಸ ಹೊಸ ಪ್ರಯೋಗಗಳನ್ನು ಮಾಡಿ, ಸರ್ವ ಸಮ್ಮತ ಸಿದ್ಧಾಂ ಗಳನ್ನು ಮಂಡಿಸುತ್ತಿದ್ದಾರೆ. ಅರ್ಥಶಾಸ್ತ್ರ, ಅವಕಾಶ, ಸಮುದ್ರ ಮತ್ತು ಭೂಮಿಯ ಗರ್ಭದಲ್ಲಿರುವ ವಿವಿಧ ಸಂಪತ್ತುಗಳಿಗೆ ಸಂಬಂಧಿಸಿದ ಆಶ್ಚರ್ಯಕಾರಕ ಶೋಧಗಳು ಬೆಳಕಿ ಬರುತ್ತಲಿವೆ. ಚಂದ್ರಲೋಕವು ಭೂಲೋಕದೊಡನೆ ನೇರ ಸಂಬಂಧ ಪ್ರಸ್ಥಾಪಿಸಲೆತ್ನಿಸುತ್ತಿದೆ ಈ ಎಲ್ಲ ಶೋಧಗಳ, ಹೊಸ ಸಿದ್ಧಾಂತಗಳ ವಿವರಗಳನ್ನು ಪಾಶ್ಚಿಮಾತ್ಯರು ಇಂಗ್ಲೀಷಿನ ಬರೆದಿಡುತ್ತಲಿದ್ದಾರೆ. ಭಾರತದ ಆರ್ಥಿಕ ಸಾಮಾಜಿಕ ಪ್ರಗತಿಯು ತ್ವರಿತವಾಗಿ ಆಗಿ, ಜ ಸಾಮಾನ್ಯರ ಆರೋಗ್ಯ, ವಯೋಮಾನ ಮತ್ತು ಜೀವನ ಮಟ್ಟಗಳು ಸುಧಾರಿಸಬೇಕಿದ್ದರೆ ಈ ಎಲ್ಲ ಹೊಸ ಶೋಧಗಳ ಲಾಭವನ್ನು ನಮ್ಮ ಜನತೆ ತುಂಬಾ ಪಡೆಯಬೇಕಾಗಿದೆ. ಈ ಜ್ಞಾ ಭಾಂಡಾರವನ್ನು ಹೊಂದುವ ಸುಲಭ ಮಾರ್ಗವೆಂದರೆ ಇಂಗ್ಲೀಷ ಭಾಷೆಯನ್ನು ಹಸ್ತಗ ಮಾಡಿಕೊಳ್ಳುವದು, ಅದರಲ್ಲಿ ಪ್ರಾವೀಣ್ಯತೆಯನ್ನು ಹೊಂದುವದು, ನಮ್ಮ ದೇಶದ ಸದ್ಯ ಪರಿಸ್ಥಿತಿಯಲ್ಲಿ ಇಂಗ್ಲೀಷ ಭಾಷೆಯ ಸಂಪೂರ್ಣ ಅಭ್ಯಾಸದ ಅವಶ್ಯಕತೆ ಎಷ್ಟಿದೆಯೆಂಬು ಮೇಲಿನ ವಿಚಾರಗಳಿಂದ ಸುಸ್ಪಷ್ಟವಾಗುವದು. ವಿಶಿಷ್ಟ ತರಗತಿಯ ದೇಶಾಭಿಮಾನಿಗಳು ಸ್ವಭಾಷಾ ಅತಿ ಪ್ರೇಮಿಗಳೂ ಇಂಗ್ಲೀಷಿನ ವಿರುದ್ಧ ಬೇಕಾದಷ್ಟು ಕೂಗೆಬ್ಬಿಸಿದರೂ ವಿಚಾ ಸ್ವಾತಂತ್ರ್ಯ, ಸಂಸ್ಕೃತಿ, ಮಾತೃಭಾಷಾ ಶಿಕ್ಷಣದ ಸಮಾನಾಧಿಕಾರ ಮುಂತಾದ ಮೂಲಭೂ ಅಧಿಕಾರಗಳ ಸವಿಯನ್ನು ಅನುಭವಿಸುತ್ತಿರುವ ಭಾರತದ ಪ್ರಜೆಗಳೂ, ಸ್ವಹಿತದ ದೃಷ್ಟಿಯಿಂ ಇಂಗ್ಲೀಷನ್ನು ಇನ್ನೂ ಬಹುಕಾಲದ ವರೆಗೆ ಉಳಿಸಿಕೊಂಡು ಹೋಗುವರೆಂಬುದರಲ್ಲಿ ಸಂ

ಯವಿಲ್ಲ ರಾಜಕೀಯ ಮತ್ತು ಭಾಷಾ ಆತಿರೇಕಿಗಳ ಒತ್ತಡಕ್ಕೊಳಪಟ್ಟು ಈ ಭಾಷೆಯ ಉಚ್ಚಾಟನೆ ಮಾಡಿದರೆ ಸ್ವವಿನಾಶಕ್ಕೆ ಎಡೆ ಮಾಡಿ ಕೊಟ್ಟಂತಾಗುವದೆಂಬುದರಲ್ಲಿ ಸಂಶಯವಿಲ್ಲ.

ಇಂಗ್ಲೀಷ ಭಾಷೆಯನ್ನು ಮಾಧ್ಯಮಿಕ ಶಾಲೆಯಲ್ಲಿ ಕಡ್ಡಾಯವಾಗಿ ಕಲಿಸಬೇಕಾದ ಭಾಷಾ ಗುಂಪಿನಲ್ಲಿ ಮಾತೃಭಾಷೆಯ ನಂತರದ ಸ್ಥಾನವನ್ನು ಕೊಡಬೇಕಾಗಿ ಬಹುಸಂಖ್ಯಾಕರ ಅಗ್ರಹವಿದೆ. ರಾಷ್ಟ್ರಭಾಷೆಯಾದ ಹಿಂದಿಗೆ ಯಾವ ಸ್ಥಾನ ಕೊಡಬೇಕೆಂಬುದರ ಬಗ್ಗೆ ಇನ್ನೂ ಒಮ್ಮತವಾಗಿಲ್ಲ. ಕೇಂದ್ರ ಸರಕಾರದ ತ್ರಿಭಾಷಾ ಮಾಲಿಕೆಯಲ್ಲಿದ್ದ ಅದನ್ನು ಐಚ್ಛಿಕ ವಿಷಯ ವನ್ನಾಗಿಸಬೇಕೆಂದು ಈಗಾಗಲೇ ಪ್ರಚಾರ ನಡೆದಿದೆ. ಹೀಗಾಗಿ ಭಾಷಾ ಸಮಸ್ಯೆಯು ಇನ್ನೂ ಅಸ್ಥಿರ ಸ್ಥಿತಿಯಲ್ಲಿರುವದೆಂಬುದು ಮಾತ್ರ ನಿಶ್ಚಿತ.

ಮಾಧ್ಯಮಿಕ ಶಾಲೆಗೆ ಬರುವ ಮಕ್ಕಳಿಗೆ ಪ್ರಾರಂಭದಲ್ಲಿ ಎಷ್ಟು ಭಾಷೆಗಳನ್ನು ಏಕಕಾಲಕ್ಕೆ ಕಲಿಸಬಹುದು. ಆ ಎಳೆ ವಯಸ್ಸಿನ ಮಗುವಿಗೆ ಎಷ್ಟು ಭಾಷೆಗಳನ್ನು ಕಲಿಯುವದು ಸಾಧ್ಯ ವಾಗಬಹುದು ಎಂಬುದರ ಬಗ್ಗೆ ಶಿಕ್ಷಣತಜ್ಞರು ಈಗಾಗಲೇ ತಮ್ಮ ನಿರ್ಣಯವನ್ನಿತ್ತಿದ್ದಾರೆ. ಮಾತೃಭಾಷೆಯನ್ನು ಹೊರತುಪಡಿಸಿ ೩-೪ ಭಾಷೆಗಳನ್ನು ಏಕಕಾಲಕ್ಕೆ ಕಲಿಯುವದು ಅಸಾಧ್ಯ ವೇನೂ ಅಲ್ಲ. 'ಬಹುಭಾಷಾ ವಸತಿಗಳಲ್ಲಿ' (Multi Language colonies) ರುವ ಮಕ್ಕಳು ಅನ್ಯರ ಅಪರಿಚಿತ ಭಾಷೆಗಳನ್ನು ಲೀಲಾಮಯವಾಗಿ ಮಾತನಾಡಲು ಕಲಿಯುವ ರೆಂಬುದು ಅನುಭವದ ಮಾತು. ಮೊದಲು ಮಾತು, ಅನಂತರ ಓದು ಮತ್ತು ಕೊನೆಯಲ್ಲಿ ಬರೆಹ, ಈ ಕ್ರಮದಲ್ಲಿ ಮಕ್ಕಳ ಅಭ್ಯಾಸವನ್ನು ಶಿಕ್ಷಕರು ಸಾಗಿಸಿದ್ದಾದರೆ, ಭಾಷೆ ಕಲಿಯುವಲ್ಲಿ ಕಲಿಸುವಲ್ಲಿ ತೊಂದರೆಗಳುಂಟಾಗಲಿಕ್ಕಿಲ್ಲ. ಪರಕೀಯ ಭಾಷೆ ಕಲಿಯುವಾಗ ಪರರೊಡನೆ ಆ ಭಾಷೆಯಲ್ಲಿ ಮಾತಾಡುವದನ್ನು ಮೊದಲು ಕಲಿಯಬೇಕಾಗುವದು. ಅದು ಆ ಭಾಷಾ ಭ್ಯಾಸದ ಮೊದಲ ಹೆಜ್ಜೆಯಾಗಬೇಕು. ಶಬ್ದಗಳ ವರ್ಣ ಅಕ್ಷರಗಳನ್ನು ಜೋಡಿಸಿ ಬರೆಯು ವದು (Spelling) ಶಬ್ದೋಚ್ಚಾರ, ಧ್ವನಿ ಏರಿಳಿತ ಮುಂತಾದವನ್ನು ಕಲಿಸುವದು ಈ ಕಾಲದಲ್ಲಿಯೇ ಎಂಬುದನ್ನು ಮರೆಯಲಾಗದು. ಶುದ್ಧ ಮತ್ತು ಸ್ಪಷ್ಟ ಉಚ್ಚಾರದ ತಳಹದಿ ಯನ್ನು ಈ ಕಾಲಕ್ಕೆ ಹಾಕಬೇಕು.

ಯಾವುದೇ ಹೊಸ ಭಾಷೆಯನ್ನು ಕಲಿಯುವಾಗ ಆ ಭಾಷೆಯೇ ಮಾತೃಭಾಷೆಯಾಗುಳ್ಳ ಮಕ್ಕಳು ಅದನ್ನು ಕಲಿಯುವ ತೆರದಲ್ಲಿ ಕಲಿಸುವ ಏರ್ಪಾಟು ಮಾಡಿದ್ದಾದರೆ, ಕಲಿಯುವ ಮತ್ತು ಕಲಿಸುವ ಕ್ರಿಯೆಗಳು ಸ್ವಾಭಾವಿಕವಾಗಿಯೂ ಸುಲಭವಾಗಿಯೂ ಆಗುವವಲ್ಲದೆ ಮಕ್ಕಳ ಪ್ರಗತಿಯು ಕೂಡ ಉತ್ತಮವಾಗುವದೆಂದು ತಜ್ಞರು ಹೇಳುತ್ತಾರೆ, ಕಾರಣ ಎಷ್ಟು ಭಾಷೆಗಳನ್ನು ಮಕ್ಕಳಿಗೆ ಸಕಾಲಕ್ಕೆ ಕಲಿಸಬಹುದೆಂಬುದನ್ನು ತಜ್ಞರಿಗೆ ಬಿಟ್ಟು, ಅಭ್ಯಾಸಪತ್ರಿಕೆ ಯಲ್ಲಿ ನಿರ್ದೇಶಿಸಿದ ಭಾಷೆಗಳನ್ನು ಶಾಸ್ತ್ರೋಕ್ತವಾಗಿ ಕಲಿಸುವದರ ಕಡೆಗೆ ಶಿಕ್ಷಕರ ಗಮನ ವಿರಬೇಕಾದುದು ಅವಶ್ಯ.

ಭಾಷೆಯನ್ನು ಕಲಿಸುವಾಗ ಕಲಿಯುವಿಕೆಯ ಬಗೆಗಿರುವ ನಿಯಮಗಳನ್ನು (Laws of learning) ಶಿಕ್ಷಕರು ಗಮನದಲ್ಲಿಟ್ಟುಕೊಂಡು ಸಾಗಬೇಕು. ಕಲಿಸುವಿಕೆಯು ಹೆಚ್ಚು ಸ್ವಾಭಾವಿಕ ಮತ್ತು ಶಾಸ್ತ್ರೋಕ್ತವಾಗುವಂತೆ ಮಾಡಿದಲ್ಲಿ ಶಿಕ್ಷಣದ ಕೆಲಸವು ಹೆಚ್ಚು ಪರಿಣಾಮ ಕಾರಿಯಾಗುವದು ಮತ್ತು ಹೀಗೆ ಕಲಿಸಿದ ಜ್ಞಾನವು ಮಗುವಿನ ಅನುಭವದ ಒಂದು ಶಾಶ್ವತ ಅಂಗವಾಗುವದು. ತಜ್ಞರ ಸಹಾಯ ಸಲಹೆಯಿಂದ ಯಾವ ಪದ್ಧತಿಯನ್ನನುಸರಿಸಿ ಭಾಷಾ ಭ್ಯಾಸವನ್ನು ಸಾಗಿಸಬೇಕೆಂಬುದನ್ನು ಶಿಕ್ಷಕರು ನಿರ್ಣಯಿಸುವದು ಉತ್ತಮ. ಈ ಬಗ್ಗೆ

ಮೇಲ್ವಿಚಾರಕರ ಮಾರ್ಗದರ್ಶನದ ವ್ಯವಸ್ಥೆಯನ್ನು ಮೈಸೂರ ಇಲಾಖೆಯವರು ಈಗಾಗಲೇ ಮಾಡಿದ್ದಾರೆ. ಇದರಿಂದ ಶಿಕ್ಷಕರಿಗೆ ತುಂಬಾ ಸಹಾಯವಾಗಬಹುದು.

Direct method of teaching (ನೇರ ಪದ್ಧತಿ) Oral Composition ಪದ್ಧತಿ, Instructive & repetition method ಭಾಷಾಂತರ ಪದ್ಧತಿ, ಮುಂತಾದವುಗಳನ್ನು ಪ್ರಸಂಗಕ್ಕನುಸರಿಸಿ ಉಪಯೋಗಿಸುವದು ಒಳಿತು. ಯಾವುದೇ ಒಂದು ಪದ್ಧತಿಗೆ ಅಂಟಿಕೊಂಡಿರುವ ಅತಿರೇಕಿಗಳಾಗಬಾರದು. ಒಟ್ಟಿನಲ್ಲಿ, ಯಾವ ಪದ್ಧತಿಯನ್ನನು ಸರಿಸುವದರಿಂದ ಶಿಕ್ಷಣದ ಕೆಲಸವು ಸ್ವಾಭಾವಿಕವಾಗಿಯೂ ಪರಿಣಾಮಕಾರಕವಾಗಿಯೂ ಆಗುವದೋ ಆ ಪದ್ಧತಿಯನ್ನನುಸರಿಸಲಡ್ಡಿಯಿಲ್ಲ. ಪಾಠದ ಅವಧಿಯು ಮುಗಿದಾಗ ಮಕ್ಕಳು ಆನಂದಿತರಾಗಿ, ಉತ್ಸಾಹಿತರಾಗಿ ಕಂಡುಬಂದರೆ ಶಿಕ್ಷಕರು ಆ ಅವಧಿಯಲ್ಲಿ ಅನುಸರಿಸಿದ ಪದ್ಧತಿಯು ಉತ್ತಮವೆಂದು ಗಣಿಸಲಡ್ಡಿಯಿಲ್ಲ.

ಒಂದು ಪಾಠದ ಅವಧಿಯಲ್ಲಿ, ಎಷ್ಟು ಭಾಗವನ್ನು ಕಲಿಸಲು ಶಕ್ಯವೆಂಬುದನ್ನು ಅನುಭವದಿಂದ ಕಂಡುಕೊಳ್ಳುವದು ಉತ್ತಮ.

ಮಗುವು ಹೊಸದಾಗಿ ಕಲಿತ ಶಬ್ದ, ವಾಕ್ಯ ಮತ್ತು ಅವುಗಳ ಖಿರಾತಂಕ ಮತ್ತು ಪರಿಣಾಮಕಾರಿ ಉಪಯೋಗವು ಭಾಷಾ ಶಿಕ್ಷಣದ ಅಳತೆ ಗೋಲಾಗಿರುವದರಿಂದ ಹೊಸ ಶಬ್ದ, ವಾಕ್ಯ ( Structure Patterns Methods ) ಗಳನ್ನು ಕಲಿಸುವಾಗ ಒಂದು ಇತಿ-ಮಿತಿಯನ್ನಿಟ್ಟುಕೊಂಡು ನಿಯಮಿತವಾಗಿ ಯೋಜನಾಬದ್ಧ ರೀತಿಯಲ್ಲಿ ಸಾಗುವದು ಉತ್ತಮ. ಜೀವನದಲ್ಲಿ ಮಾತುಗಾರಿಕೆಯು ತಮ್ಮ ವಿಚಾರಗಳನ್ನು ಸ್ಪಷ್ಟವಾಗಿ ಯೋಗ್ಯ ಶಬ್ದ-ವಾಕ್ಯಗಳಲ್ಲಿ ಹೇಳುವ-ಬರೆಯುವ ಶಕ್ತಿಯ ಅವಶ್ಯಕತೆ ಎಷ್ಟಿದೆಯೆಂಬುವದನ್ನು ಹೇಳುವ ಅವಶ್ಯಕತೆಯಿಲ್ಲ. ಮಾನವ ಜೀವನದಲ್ಲಿ ಶಾಂತಿ ಸುಖಗಳು ಅವನು ಉಪಯೋಗಿಸುವ ಭಾಷೆಯನ್ನವಲಂಬಿಸಿರುವದರಿಂದ, ಮಗುವಿನಲ್ಲಿ ಶಬ್ದ—ವಾಕ್ಯಗಳ ಸಾಕಷ್ಟು ಸಂಗ್ರಹವಿರುವದವಶ್ಯ. ಈ ಶಬ್ದ—ವಾಕ್ಯಗಳ ಯೋಗ್ಯ ಉಪಯೋಗದ ಮೇಲೆಯೇ ಅವನ ಪ್ರಗತಿ ಅವಲಂಬಿಸಿರುವದರಿಂದ ಈ ಭಾಷೆಯ ಈ ಅಂಶದ ಕಡೆಗೆ ಶಿಕ್ಷಕರು ವಿಶೇಷ ಗಮನ ಕೊಡುವದವಶ್ಯ. ನೀವು ಉಪಯೋಗಿಸುವ ಶಬ್ದ - ಶಬ್ದಸಮುಚ್ಚಯದ ಮುಖಾಂತರವೇ ನಿಮ್ಮ ಭಾವನೆಯ ತೀವ್ರತೆ, ಆಳ ಮತ್ತು ನಿಮ್ಮ ಮಾತಿನ ಉದ್ದೇಶದ ಅರ್ಥವು ನಿಮ್ಮ ಮಿತ್ರರಿಗೂ, ಇನ್ನಿತರರಿಗೂ ಆಗುವದರಿಂದ ಜೀವನದಲ್ಲಿ ನೆರೆ-ಹೊರೆ ಸಮಾಜ ಮತ್ತು ಸಾಮಾನ್ಯ ಜನತೆಯೊಡನೆಯೂ ನಿಮ್ಮ ಸೌಹಾರ್ದ, ಸಹಕಾರ ಮಧುರ ಸಂಬಂಧಗಳು ಇವುಗಳ ಯೋಗ್ಯ ನಿಯಂತ್ರಿತ ಉಪಯೋಗವನ್ನವಲಂಬಿಸಿರುವದರಿಂದ, ವ್ಯಕ್ತಿಯಲ್ಲಿರಬೇಕಾದ ಸಾಕಷ್ಟು ಶಬ್ದ-ವಾಕ್ಯಗಳ ಮಹತ್ವ ಎಷ್ಟಿದೆಯೆಂಬುದರ ಅರಿವು ಸಹಜವಾಗಿ ಆಗಬಹುದು. "Your words are your keys for your thoughts And the more words you have at your command, the deeper, clearer & more accurate will be your thinking" Your command of any language will not only improve the process of your mind but it will give you assurance, build your self-confidence, lend colour to your personality, increase your popularity ( Funk and Norman Luis ) "ಮಾತು ಬಲ್ಲವ ಮಾಣಿಕ ತಂದ, ಮಾತು ಅರಿಯದವ ಜಗಳ ತಂದ, ತನ್ನ ವಿನಾಶಕ್ಕೆ ಎಡೆ ಮಾಡಿಕೊಟ್ಟ." ಈ ಲೋಕವಾಕ್ಯಗಳಾದರೂ ಈ ಅಂಶವನ್ನೇ ವ್ಯಕ್ತಪಡಿಸುತ್ತವೆ.

ಮಕ್ಕಳಲ್ಲಿ ಸಾಕಷ್ಟು ಶಬ್ದಸಂಗ್ರಹವಾಗುವಂತೆ ಶಿಕ್ಷಕರು ಏರ್ಪಾಡು ಮಾಡಬೇಕು. (Vocabulary building) ಒಂದು ಕಾಲಕ್ಕೆ ಒಂದು ವಾರದಲ್ಲಿಯ ಎಷ್ಟು ಶಬ್ದಗಳನ್ನು ವಾಕ್ಯಗಳನ್ನು (Structure Patterns) ಕಲಿಸಬೇಕೆಂಬುದನ್ನು ಮುಂಚಿತವಾಗಿಯೇ ನಿರ್ಣಯಿಸಿ ಅವುಗಳ ದೃಢೀಕರಣ ಪ್ರಗತಿಯನ್ನು ನಿಯಮಿತವಾಗಿ ಬೆಳೆಸುತ್ತ ಹೋಗಬೇಕು. Vocabulary tests, word games, spelling games ಮುಂತಾದವುಗಳನ್ನು ವರ್ಗದಲ್ಲಿ ಮೇಲಿಂದ ಮೇಲೆ ಏರ್ಪಡಿಸಿದಲ್ಲಿ ವಾಕ್ಯಗಳ ಶಬ್ದಸಂಗ್ರಹ ಅವುಗಳ ಯೋಗ್ಯ ಉಪಯೋಗ ಮಾಡುವಲ್ಲಿ ರೂಢಿಯಾಗುವದಲ್ಲದೆ ಭಾಷೆಯ ಮೇಲಿನ ಹಿಡಿತ ಬೆಳೆಯುತ್ತ ಹೋಗುವದು. ಆದರೆ ಈ ಅವಧಿಯಲ್ಲಿ ಲಕ್ಷ್ಯದಲ್ಲಿಡಬೇಕಾದ ಮಹತ್ವದ ಅಂಶವೆಂದರೆ ಮಕ್ಕಳ ಗ್ರಹಣಶಕ್ತಿ ಮತ್ತು ಅದರ ಮಿತಿ ಆ ಎಳೆಮಕ್ಕಳಿಗೆ ಆಹಾರ ಕೊಡುವಾಗ ತಾಯಿಯು ಮಗುವಿನ ವಯಸ್ಸು ಮತ್ತು ಅದರ ಪಾಚಕ ಶಕ್ತಿಯನ್ನು ಹೇಗೆ ಗಮನಿಸುವಳೋ ಅದೇ ತರವಾಗಿ ಶಿಕ್ಷಕರು ಸಹ ಬೌದ್ಧಿಕ ಆಹಾರದ ತುತ್ತನ್ನು ಮಗುವಿಗೆ ಉಣ್ಣಿಸುವಾಗ ಲಕ್ಷದಲ್ಲಿಡಬೇಕಾದುದು ಅವಶ್ಯ. ಹೊಸದಾಗಿ ಕಲಿಸಿದ ಶಬ್ದ-ವಾಕ್ಯಗಳನ್ನು ಮರುದಿನದ ಪಾಠದ ಆರಂಭದಲ್ಲಿಯೇ ರೂಢಿಯಲ್ಲಿ ತರಲೆತ್ನಿಸಬೇಕು, ಮತ್ತು ತಪ್ಪು ಗ್ರಹಿಕೆ, ತಪ್ಪು ತಿಳವಳಿಕೆ ಮತ್ತು ಪಾಠದ ಅವಧಿಯಲ್ಲಿಯ ವಿದ್ಯಾರ್ಥಿಯ ಅಲಕ್ಷತನದಿಂದಾದ ಇನ್ನಿತರ ತಪ್ಪುಗಳನ್ನು ಸಕಾಲದಲ್ಲಿ ತಿದ್ದಿ ಅವುಗಳ ಸರಿಯಾದ ಉಪಯೋಗ ಮಾಡುವಲ್ಲಿ ರೂಢಿ ಮಾಡಿಸಬೇಕು.

ಶಿಕ್ಷಣದ ಕೆಲಸವು ದ್ವಿಮುಖವಾದುದು. ಶಿಕ್ಷಕನು ಕಲಿಯುವ ಕ್ರಿಯೆ-ಕೆಲಸದಲ್ಲಿ ಸಹಾಯ ನೀಡುವವನಾದರೆ ಮಗುವು ಕಲಿಯುವವನು, ಇಲ್ಲಿ ಯಾರಿಗೆ ಹೆಚ್ಚು ಮಹತ್ವ ಕೊಡಬೇಕೆಂಬುದನ್ನು ಹೇಳುವ ಅವಶ್ಯಕತೆ ಇಲ್ಲ, ಮಗುವು ಕಲಿತವೆಂಬುದು ಸಿದ್ಧವಾದರೆ, ಶಿಕ್ಷಕನು ಕಲಿಸಿದನೆಂದು ಸಾಧಿಸುವ ಅವಶ್ಯಕತೆ ಇಲ್ಲ. ಶಿಕ್ಷಕರು ಮಕ್ಕಳಿಗೆ ಎಷ್ಟು ಕಲಿಸಿದೆವೆಂಬುದರ ಕಡೆಗೆ ಹೆಚ್ಚು ಗಮನಿಸದೆ ತಾವು ಕಲಿಸಿದುದರಲ್ಲಿಯ ಎಷ್ಟನ್ನು ಕಲಿತು "ಆತ್ಮಸಾತ್" ಮಾಡಿಕೊಂಡರೆಂಬುದರ ಕಡೆಗೆ ಗಮನಿಸುವದು ಅವಶ್ಯ.

ಕಲಿಸುವಲ್ಲಿ ಶಿಕ್ಷಕರಿಗೆ ಪೂರ್ಣ ಸ್ವಾತಂತ್ರ್ಯವಿರಬೇಕಾದುದೇನೋ ಆಗತ್ಯವಾದರೂ ಯೋಗ್ಯ ಪದ್ಧತಿಯನ್ನು ಅನುಸರಿಸುವಲ್ಲಿ ಮತ್ತು ಕಲಿಯಿಸುವಿಕೆಗೆ ಸಂಬಂಧಿಸಿದ ನಿಯಮಗಳನ್ನು ತಪ್ಪದೆ ಅನುಸರಿಸುವಲ್ಲಿ ಅವರು ಬಂಧಿತರಾಗಿಯೇ ಇರಬೇಕಾದುದು ಮಕ್ಕಳ ಹಿತದ ದೃಷ್ಟಿಯಿಂದ ಅನಿವಾರ್ಯವಾದುದು.

ಹಸ್ತಾಕ್ಷರ-ಕೈಬರಹದ ಬಗ್ಗೆ ಒಂದೆರಡು ಮಾತುಗಳನ್ನು ಇಲ್ಲಿ ಹೇಳವೆ ಗತ್ಯಂತರವಿಲ್ಲ.

ನಮ್ಮ ಪೂರ್ವಜರ ಹಸ್ತಾಕ್ಷರಗಳು ಮುತ್ತಿನಂತಿದ್ದುವೆಂಬುವದು ಹಳೆ ಗ್ರಂಥಗಳ ಮೂಲ ಪ್ರತಿಗಳಿಂದಲೂ, ತಾಡಪತ್ರಗಳಿಂದಲೂ ಕಂಡುಬರುತ್ತದೆ. ಅವರು ಬರೆದ ಅಕ್ಷರಗಳು ನೋಡಲು ಅಂದವಾಗಿರುವವಲ್ಲದೆ, ಅಕ್ಷರಗಳ ಅವಯವಗಳಲ್ಲಿ ಸಪ್ರಮಾಣತೆಯೂ ಬರವಣಿಗೆಯಲ್ಲಿ ಸೌಂದರ್ಯ ದೃಷ್ಟಿಯೂ ಕಂಡು ಬರುತ್ತವೆ. ಕಳೆದ ೩೦-೭೦ ವರ್ಷಗಳಿಂದ ಬರವಣಿಗೆ-ಹಸ್ತಾಕ್ಷರದ ಕಡೆಗೆ ಸಾಕಷ್ಟು ಲಕ್ಷ್ಯ ಪೂರೈಸಿಲ್ಲವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಈ ದುರವಸ್ಥೆಗೆ ಹಲವಾರು ಕಾರಣಗಳಿರಬಹುದು. ಕಿತ್ತಿ ಬರೆಯುವದು, ಕಾಪಿ ಬರೆಯುವದು ಕೆಳಗಿನ ವರ್ಗಗಳಲ್ಲಿ ಕ್ರಮೇಣ ಕಡಿಮೆಯಾಗುತ್ತ ಬಂದು, ಇತ್ತೀಚೆಗೆ ಅದು ಪೂರ್ಣ ಮಾಯವಾಗಿದೆ. ಬಾಲಕವರ್ಗ ಮತ್ತು ೧ ರಿಂದ ೪ ನೆಯ ವರ್ಗಗಳಲ್ಲಿ ಮತ್ತು ಹಾಯಸ್ಕೂಲಿನ ಕೆಳವರ್ಗಗಳಲ್ಲಿ (ಮಾತೃಭಾಷೆಗೆ ಸಂಬಂಧಿಸಿ, V, VI, VII ಇಂಗ್ಲೀಷಿನ ಅಭ್ಯಾಸಕ್ಕೆ ಸಂಬಂಧಿಸಿ) ಕಾಪಿ ಬರೆಹ, ನೋಡಿ ಬರೆಯುವದು, ಶುದ್ಧ ಬರೆಹ ಮುಂತಾದವುಗಳ ಮಹತ್ವ ಕಡಿಮೆಯಾಗಿ ಅವು ಪೂರ್ಣ ದುರ್ಲಕ್ಷಿಸಲ್ಪಟ್ಟಿವೆಯೆಂದು

ಹೇಳಿದರೆ ತಪ್ಪಾಗಲಿಕ್ಕಿಲ್ಲ. ಫಾವಂಟಿನ್ ಪೆನ್ನಿನ, ಬಾಲ್ ಪೆನ್ನಿನ ಅನಿರ್ಬಂಧ ಉಪಯೋಗವೂ ಈ ದುರವಸ್ಥೆಯ ಕಾರಣಗಳಲ್ಲೊಂದಾಗಿದೆಯೆಂದು ತಜ್ಞರ ಮತ. ಮೇಲಿನ ಎಲ್ಲ ಮಾತುಗಳು ಇಂಗ್ಲಿಷಿಗೆ ಅನ್ವಯಿಸುವಂತೆ ಕನ್ನಡಕ್ಕೆ ಅನ್ವಯಿಸುತ್ತವೆ. ತಾವು ಬರೆದದ್ದು ಅನ್ಯರಿಗೆ ಓದಲಿಕ್ಕೆ ಬರುವದಿಲ್ಲ. ಕೆಲ ಸಂದರ್ಭದಲ್ಲಿ ತಾವು ಬರೆದದ್ದು ತಮಗೇ ಓದಲಿಕ್ಕೆ ಬರದಷ್ಟು ಅಕ್ಷರಗಳೂ ಹಾಳಾಗಿರುತ್ತವೆ. ಸಂಸ್ಕೃತ ಸುಭಾಷೆಯೊಂದರಲ್ಲಿ ವಿನೋದಕ್ಕಾಗಿ ಹೇಳಿದ "ಸಖೀ ಚತುರಃ ಮೇ ಭರ್ತಾ ಯಲ್ಲಿಖಿತಮ್ ತದ್ ನ ಕೋಪಿ ವಾಚಯತಿ । ಸಖೀ ಚತುರತರಃ ಮೇ ಭರ್ತಾ-ಯಲ್ಲಿಖಿತವ್ ತದ್ ಸ್ವಯಮಪಿ ನ ವಾಚಯತಿ" ಎಂಬುದು ಈಗ ನೂರಕ್ಕೆ ನೂರರಷ್ಟು ಸತ್ಯ ಮಾತಾಗಿದೆಯೆಂಬುದನ್ನು ಮನದಟ್ಟು ಮಾಡಿಕೊಳ್ಳಬಹುದು. ಬರೆವಣಿಗೆಯಲ್ಲಿ ಸುಧಾರಣೆಯಾಗುವದು ಅವಶ್ಯವೆಂದಾ ಆ ಸುಧಾರಣೆಯನ್ನು ಸಾಧಿಸುವ ಬಗ್ಗೆ ಸುಸಂಘಟಿತ ಪ್ರಯತ್ನ ಮಾಡುವದು ಅತ್ಯವಶ್ಯ. ಈ ಕೆಲಸದಲ್ಲಿ ಶಿಕ್ಷಕರು ತುಂಬಾ ಪರಿಶ್ರಮ ಪಡಬೇಕಲ್ಲದೆ ಮಕ್ಕಳ ಮತ್ತು ಪಾಲಕರ ನೆರವನ್ನೂ ಸಹಕಾರವನ್ನೂ ತಪ್ಪದೆ ಪಡೆಯಬೇಕು. ಇಂಗ್ಲೀಷಿನಲ್ಲಿ ಕರ್ಸಿವ್ಹ-ರನಿಂಗ ಹ್ಯಾಂಡ ಮತ್ತು ಪ್ರಿಂಟ ಸ್ಕ್ರಿಪ್ಟ ಎಂಬುದಾಗಿ ಬರೆಹದಲ್ಲಿ ಎರಡು ಪ್ರಕಾರಗಳುಂಟು. ಪ್ರಿಂಟ ಸ್ಕ್ರಿಪ್ಟ ಇತ್ತೀಚಿನ ರೂಢಿಯಲ್ಲಿ ಬಂದುದು, ಅಚ್ಚುಕಟ್ಟು ಓರಣಗಳ ದೃಷ್ಟಿಯಿಂದ ಅದು ಗ್ರಾಹ್ಯವೆನಿಸಿದರೂ ಸೌಂದರ್ಯದ ದೃಷ್ಟಿ ಅದರಲ್ಲಿಲ್ಲ. ಆ ಸೌಂದರ್ಯವನ್ನು ಓಟದ-ಮೋಡಿ ಲಿಪಿಯಲ್ಲಿ ಮಾತ್ರ ಕಾಣಬಹುದು. ಆಧುನಿಕ ಯಾಂತ್ರಿಕ ಯುಗದಲ್ಲಿ ಸೌಂದರ್ಯೋಪಾಸಕರ ಸಂಖ್ಯೆ ಇಲ್ಲದಂತಾಗುತ್ತದೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಶಿಕ್ಷಕರು ಇಂಗ್ಲೀಷಿನ ವರ್ಣಮಾಲೆಯ ೨-೩ ನೆಯ ಲಿಪಿಗಳಲ್ಲಿ ಮಕ್ಕಳಿಗೆ ಸಾಕಷ್ಟು ರೂಢಿ ಮಾಡಿಸಿ, ಕರ್ಸಿವ್ಹ-ಓಟದ ಮೋಡಿ ಪದ್ಧತಿಯ ಪುನರುಜ್ಜೀವನವನ್ನು ಸಾಧಿಸಿದಲ್ಲಿ ಒಂದು ದೊಡ್ಡ ಕೆಲಸ ಮಾಡಿದಂತಾಗುವದು. ಅಕ್ಷರಗಳನ್ನು ಬರಿಸುವಾಗ ವರ್ಣರಚನೆ ಅಕ್ಷರಗಳ ಅವಯುವಗಳ ಅಂಗಸ್ಥಿತಿ ಮುಂತಾದವುಗಳ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸಬೇಕಾಗುವದು. ಹೀಗೆ ಮಾಡದೇ ಹೋದಲ್ಲಿ ಅನಪೇಕ್ಷಿತ ತಪ್ಪುಗಳು ಕಂಡುಬರುವವು. ಉದಾ— d-b, C-G, n-u, c-e, p-q, r-v, m-w ಮುಂತಾದವನ್ನು ಬರೆಯುವಲ್ಲಿ ಮೊದಲನೆಯದರ ಬದಲು ಎರಡನೆಯದನ್ನು ಉಪಯೋಗಿಸುವದು ಕಂಡುಬರುವದು. ಕೆಲ ಸಂದರ್ಭದಲ್ಲಿ ಅಕ್ಷರಗಳನ್ನು ತಿರುವು ಮುರುವಾಗಿ ಬರೆದುದೂ ಕಂಡುಬರುತ್ತದೆ. ಈ ತಪ್ಪುಗಳ ಕಡೆಗೆ ಶಿಕ್ಷಕರು ವರ್ಣಮಾಲೆ, ಮೂಲಾಕ್ಷರ ಲಿಪಿಗಳನ್ನು ಕಲಿಸುವಾಗ ಹೆಚ್ಚು ಗಮನ ಕೊಟ್ಟು, ಮಕ್ಕಳು ತಪ್ಪು ಮಾಡಿದಾಗ ಅವರಿಂದಲೇ ತಿದ್ದಿಸಿ, ಪುನಃ ಪುನಃ ಬರೆಯಿಸಿ, ರೂಢಿ ಮಾಡಿಸುತ್ತ ಹೋದಲ್ಲಿ ಈ ತೆರದ ತಪ್ಪುಗಳಾಗುವ ಸಂಭವ ಕಡಿಮೆಯಾಗುತ್ತ ಹೋಗುವದು.

ಭಾಷಾಪ್ರಭುತ್ವವನ್ನು ಸಾಧಿಸುವಾಗ ಶಬ್ದಸಂಪತ್ತು ಕೆಲ ವಿಶಿಷ್ಟ ವಾಕ್ಯರಚನೆಗಳನ್ನು ಅವಗತ ಮಾಡಿ ಅವುಗಳನ್ನು ಸುಲಭವಾಗಿ ಉಪಯೋಗ ಮಾಡಿಕೊಳ್ಳುವದು, ಉಚ್ಚಾರ, ಶಬ್ದಗಳ ವಾಕ್ಸಂಪ್ರದಾಯ, ಒಳ್ನುಡಿ, ವಾಕ್ಸರಣಿಗಳ ಯೋಗ್ಯ ಉಪಯೋಗ, ಓದುವಲ್ಲಿಯ ಪ್ರಾವೀಣ್ಯತೆ ಮತ್ತು ಶಬ್ದಗಳ ಕಾಗುಣಿತ, ಬರೆಯುವಲ್ಲಿಯ ಪ್ರಾವೀಣ್ಯತೆ ಇವುಗಳ ಸಪ್ರಮಾಣ ಬೆಳವಣಿಗೆ ಸಾಧಿಸುವದಕ್ಕೆ ಅವಲಂಬಿಸಿರುತ್ತದೆ. ಈ ಪರಿಷ್ಕೃತ ಮಾಲಿಕೆಯಲ್ಲಿ ಇದೆಲ್ಲದರಲ್ಲಿ ಸಾಕಷ್ಟು ಲಕ್ಷ್ಯ ಪೂರೈಸದಿದ್ದರೂ ಅವುಗಳನ್ನು ಅಲಕ್ಷಿಸಿಲ್ಲ. ಓದುಗರು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಉಪಲಬ್ಧವಿದ್ದ ಸ್ಥೂಲ ಮಾಹಿತಿಯ ಸೂಚನೆಗಳ ಸಹಾಯದಿಂದ ಭಾಷಾಪ್ರಭುತ್ವದ ತಳಹದಿಯನ್ನು ಹಾಕಿದಲ್ಲಿ ಪ್ರಕಾಶಕರ ಪ್ರಯತ್ನವು ಸಾರ್ಥಕವಾಯಿತೆಂದು ಗಣಿಸಲಾಗುವದು.

ದಿ. ೧-೧-೧೯೬೧.

ಪ್ರಕಾಶಕರು.

# ಅನುಕ್ರಮಣಿಕೆ.

## CONTENTS.

# ಭಾಷಾಂತರಪಾಠಮಾಲೆ.

## ಮೂರನೆಯ ಪುಸ್ತಕವು.

### ೧ ನೆಯ ಪಾಠ.

**ಅಪೂರ್ಣ ಭವಿಷ್ಯತ್ಕಾಲ.**

**Future Imperfect.**

*Singular.*

| | | | |
|---|---|---|---|
| ೧ | *1st person,* | I shall be writing | ನಾನು ಬರೆಯುತ್ತಿರುವೆನು. |
| | *2nd per.* | Thou wilt be writing | ನೀನು ಬರೆಯುತ್ತಿರುವಿ. |
| | *3rd per.* | He will be writing | ಅವನು ಬರೆಯುತ್ತಿರುವನು. |

*Plural.*

| | | |
|---|---|---|
| *1st.* | We shall be writing | ನಾವು ಬರೆಯುತ್ತಿರುವೆವು. |
| *2nd.* | You will be writing | ನೀವು ಬರೆಯುತ್ತಿರುವಿರಿ. |
| *3rd.* | They will be writing | ಅವರು ಬರೆಯುತ್ತಿರುವರು. |

೨ ☞ ಈ ಕಾಲದ ರೂಪಗಳು ವಿದ್ಯಾರ್ಥಿಗಳಿಗೆ ತಿಳಿದಿರಬೇಕೆಂಬದಾಗಿ ಅವುಗಳನ್ನು ಇಲ್ಲಿ ಕೊಟ್ಟದೆ. ಆದರೆ ಚೆನ್ನಾಗಿ ವಿಚಾರ ಮಾಡಿ ನೋಡಿದರೆ ಈ ರೂಪಗಳನ್ನು ರೂಢಿಯಲ್ಲಿ ಉಪಯೋಗಿಸುವದು ಬಹಳ ಕಡಿಮೆ; ಏಕೆಂದರೆ, ಕೇವಲ ಭವಿಷ್ಯತ್ಕಾಲವನ್ನು ಆಗಾಗ್ಗೆ ಅಪೂರ್ಣ ಭವಿಷ್ಯತ್ಕಾಲಕ್ಕೆ ಬದಲಾಗಿ ಪ್ರಯೋಗಿಸುವದುಂಟು, ಆದುದರಿಂದ, ಅಪೂರ್ಣ ಭವಿಷ್ಯತ್ಕಾಲದ ಅರ್ಥವಿದ್ದಾಗ್ಯೂ, ಭವಿಷ್ಯತ್ಕಾಲವನ್ನು ಇಷ್ಟವಿದ್ದಾಗ ಉಪಯೋಗಿಸಬಹುದು. ಆದರೆ ಈ ಎರಡೂ ಕಾಲಗಳಲ್ಲಿರುವ ನಿಜವಾದ ಭೇದವೇನಂದರೆ, ಅಪೂರ್ಣ ಭವಿಷ್ಯತ್ತು 'ಮುಂದೆ ಬರುವ ಕಾಲದಲ್ಲಿ ಕ್ರಿಯೆಯು ನಡೆಯುತ್ತಾ ಇರುವದು' ಎಂಬದನ್ನು ಸೂಚಿಸುತ್ತದೆ. ಮತ್ತು ಈ ಕಾಲವನ್ನು ಪ್ರಯೋಗಿಸಿದಾಗ ಕ್ರಿಯೆ ನಡೆಯುವ ವೇಳೆಯನ್ನು ಹೇಳಬೇಕಾಗುತ್ತದೆ. ಆದರೆ ಬರೇ ಭವಿಷ್ಯತ್ಕಾಲದಲ್ಲಿ ಹೀಗೇನೂ ಇರದೆ, ಅದರಿಂದ ಮನಸ್ಸಿನೊಳಗಿನ ಸಂಕಲ್ಪ ಮಾತ್ರ ಕಂಡುಬರುವದು, ಮತ್ತು ವೇಳೆ ಹೇಳುವದು ಅವಶ್ಯವಿಲ್ಲ.

ಉದಾ:–I shall write the letter when you come ನೀನು ಬಂದಾಗ ನಾನು ಓಲೆ ಬರೆಯುವೆನು.

I shall be writing the letter when you come ನೀನು ಬಂದಾಗ ನಾನು ಓಲೆಯನ್ನು ಬರೆಯುತ್ತಿರುವೆನು.

## ೩ ಶಬ್ದಸಂಗ್ರಹ ೧.

| | | | |
|---|---|---|---|
| Ab'sence | ಇಲ್ಲದೆ ಇರೋಣ, ಗೈರುಹಾಜರಿ. | E-con'o-my | ಮಿತವ್ಯಯ. |
| Pru'dent | ವಿವೇಕವುಳ್ಳ, ದೂರ ದೃಷ್ಟಿಯುಳ್ಳ. | To as-cend' | ಏರು, ಹತ್ತು. |
| Mis-for'tune | ವಿಪತ್ತು, ದುರ್ದೈವ, | While | ಕ್ರಿ. ವಿ. ಆಗ¹⁾ ಅಷ್ಟು ಹೊತ್ತಿನಲ್ಲಿ. |
| A man'sion | ದೊಡ್ಡಮನೆ, ಮಹಾಲು, ಅರಮನೆ. | Sul'try | ಗಮ್ಮುಕುಚ್ಚುವ, ಸೆಕೆಯಾಗುವ. |
| Ha'ris-chandra | ಹರಿಶ್ಚಂದ್ರ. | To start | ಹೊರಡು, ಆರಂಭಿಸು. |
| ಭರತಖಂಡ | In-di-a. | ಬಿಟ್ಟುಬಿಡು, ತೊರೆ, ಪರಿತ್ಯಜಿಸು | to a-band'on. |
| ಎಂಬ | called, named, by name. | ಪಂಕ್ತಿ, ಸಾಲು | a se'ries, a row. |
| (ರಾಜ್ಯ)ಪರಿತ್ಯಾಗ ಮಾಡು | to ab'di-cate. | ಧರ್ಮಿಷ್ಠ, ಶ್ರದ್ಧೆಯುಳ್ಳ ಶೀಲವಂತ | pi'ous, vir'tuous. |
| ಗೊತ್ತಿದ್ದ | known. | ದಂಡಿಸು, ಜುಲ್ಮಾನೆ ಹಾಕು | to fine. |

| | |
|---|---|
| To enjoy' one's self | ಸುಖಬಡು, ಸಂತೋಷದಿಂದ ಹೊತ್ತುಗಳೆ. |
| To keep one's word | ವಚನ ಪಾಲಿಸು. |
| Just as, as | ಆಗಲೇ, ಅದೇ ಸಮಯಕ್ಕೆ. |
| A lit'tle ear'li-er | ತುಸು ಮುಂಚೆ. |
| A lit'tle la'ter | ಸ್ವಲ್ಪ ತಡಮಾಡಿ. |
| A great man'y | ಬಹಳ. |
| To grow rich | ಐಶ್ವರ್ಯವಂತನಾಗು. |
| To grow tall | ಉದ್ದ ಬೆಳೆ, ಎತ್ತರ ಬೆಳೆ. |
| All day, the whole day | ಇಡೀ ದಿವಸ, ಹಗಲೆಲ್ಲ. |
| To be a-fraid' (of) | ಅಂಜು, ಭಯಪಡು. |
| It thunders | ಗದ್ದರಿಸುತ್ತದೆ, ಗರ್ಜಿಸುತ್ತದೆ, ಗುಡಿಗುಡಿಸುತ್ತದೆ. |
| It light'ens | ಮಿಂಚುತ್ತದೆ. |
| Just now | ಈಗ, ಇದೇ ಈಗ. |

1) ಕನ್ನಡದಲ್ಲಿ ಭಾಷಾಂತರ ಮಾಡುವಾಗ ಇದನ್ನು ಕ್ರಿಯಾಪದಕ್ಕೆ ಕೂಡಿಸಬೇಕು. ಉದಾ—while I am there ನಾನು ಅಲ್ಲಿ ಇರುವಾಗ.

೪. Do you think that the children *will be learning* their lessons during our absence[1]? I hope so. While they are learning their lessons, we *shall be enjoying* ourselves in the garden[2]. Rama *will be going* to school next year when his sister is returning[2]. We *shall be going* just as you are coming[2]. You *will be taking* your tiffin at two o'clock, I shall therefore send you the papers a little later. In large towns a great many beggars are generally found. Misfortune teaches us prudence. This farmar has grown rich by industry and economy. Your sister has grown very tall. It has rained a little and the farmars will now sow seeds. It is half past ten o'clock; let us go to school. I hope we shall not be late. The train *will be starting* as we enter the station. You talk very fast. It is a quarter to eleven. Yesterday it rained all day. It is very sultry just now. Does it hail in Bombay? Some people are afraid when it thunders and lightens. You are not afraid of him.

ನಾಳೆ ಇಷ್ಟು ಹೊತ್ತಿಗೆ ನೀನು ನಡೆಯುತ್ತಿರುವಿ. ನಾನು ನಾಳೆ ಹಗಲೆಲ್ಲ ಓದುತ್ತಿರುವೆನು; ಆದರೆ ನೀವು ಏನು ಮಾಡುತ್ತಿರುವಿರಿ? ನೀನು ನಾಳೆ ಬಂದಾಗ ನಾನು ಆ ಕೆಲಸವನ್ನು ಮಾಡುತ್ತಿರುವೆನು. ಅವನು ಹುಲ್ಲುಕೊಯ್ಯುತ್ತಿರುವಾಗ ನೀನು ಅವನ ಬಳಿಗೆ ಹೋಗು. ನೀನು ಬಂದಾಗ ನಾನು ಬರೆಯುತ್ತಿರುವೆನು. ನೀನು ಮನೆಗೆ ಹೋಗು; ನಾನು ಇಲ್ಲಿ ಇರುವೆನು. ಗೋವಿಂದನು ಈಹೊತ್ತು ಸಾಲೆಗೆ ಹೋಗಲಿಲ್ಲ; ಅವನು ಮನೆಯಲ್ಲಿದ್ದಾನೆ. ರಾಮನು ಮೂರೂವರೆ ಗಂಟೆಗೆ ಮನೆಗೆ ಹೋದನು. ಈ ಎತ್ತು ನಿಮ್ಮದೋ? ಭರತಖಂಡದಲ್ಲಿ ಹರಿಶ್ಚಂದ್ರನೆಂಬವನೊಬ್ಬ ಅತಿ[3] ಪ್ರಾಮಾಣಿಕನಾದ ಅರಸನಿದ್ದನು. ಆತನ ವೃತ್ತಾಂತವು

---

1) ನಾವು ಇಲ್ಲದಾಗ. 2) ಭವಿಷ್ಯತ್ಕಾಲದಲ್ಲಿ ಎರಡು ಕ್ರಿಯೆಗಳು ಒಮ್ಮೆಲೆ ಆಗತಕ್ಕವಿದ್ದರೆ ಪ್ರಧಾನ ವಾಕ್ಯದಲ್ಲಿ ಅಪೂರ್ಣ ಭವಿಷ್ಯತ್ಕಾಲವನ್ನು, ಅಧೀನ ವಾಕ್ಯದಲ್ಲಿ ಅಪೂರ್ಣ ವರ್ತಮಾನಕಾಲವನ್ನು ಒಮ್ಮೊಮ್ಮೆ ಪ್ರಯೋಗಿಸುವರು. 3) Very, exceedingly.

ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರಬಹುದು[1]. ಆತನು ಒಳ್ಳೇ ಧರ್ಮಿಷ್ಠನಾಗಿಯೂ ಸತ್ಯವಂತನಾಗಿಯೂ ಇದ್ದನು. ಆತನು ರಾಜ್ಯವನ್ನು ಪರಿತ್ಯಾಗ ಮಾಡಿ ತನ್ನ ವಚನವನ್ನು ಪಾಲಿಸಿದನು. ಕಟ್ಟಕಡೆಗೆ ಆತನು ತನ್ನನ್ನು ಸಹ ಮಾರಿಕೊಂಡನು[2]. ಆದರೂ ಪ್ರಾಮಾಣಿಕತನವನ್ನು ಬಿಡಲಿಲ್ಲ.

## ೨ ನೇ ಪಾಠ.

### ಸಂಬಂಧಾರ್ಥಕ ಸರ್ವನಾಮಗಳು.

### Relative Pronouns.

೫ ಇಂಗ್ಲಿಷಿನಲ್ಲಿ ಮುಖ್ಯವಾದ ಸಂಬಂಧಾರ್ಥಕ ಸರ್ವನಾಮಗಳು ಐದು[3]. ಯಾವವೆಂದರೆ—Who, which, that, what, as.

೬ ಇಂಗ್ಲಿಷಿನಲ್ಲಿ ಸಂಬಂಧಾರ್ಥಕ ಸರ್ವನಾಮವು ಅದೇ ವಾಕ್ಯದೊಳಗಿನ ಹಿಂದೆ ಹೋದ ಒಂದು ನಾಮಪದಕ್ಕಾಗಲಿ ದರ್ಶಕ ಸರ್ವನಾಮಕ್ಕಾಗಲಿ ಸಂಬಂಧಿಸಿರುತ್ತದೆ; ಮತ್ತು ಆ ನಾಮಪದಕ್ಕೆ ಅಥವಾ ದರ್ಶಕ ಸರ್ವನಾಮಕ್ಕೆ ಆ ಸಂಬಂಧಾರ್ಥಕ ಸರ್ವನಾಮದ antece'dent (ಪೂರ್ವಗಾಮೀ ಶಬ್ದ) ಅನ್ನುತ್ತಾರೆ. ಕನ್ನಡದಲ್ಲಿ ಈ ಸರ್ವನಾಮಗಳು ಇಲ್ಲ. ಇವುಗಳ ಕಾರ್ಯವು ಕೃದ್ವಾಚಕಗಳಿಂದ ಸಾಗುತ್ತದೆ. ಉದಾ—

This is the house *that* I have built ನಾನು ಕಟ್ಟಿದ ಮನೆಯು ಇದೇ. He, *who* speaks the truth, is much esteemed ಸತ್ಯ ಮಾತಾಡುವವನನ್ನು ಬಹಳ ಮನ್ನಿಸುತ್ತಾರೆ.

೭ Who ಎಂಬ ಸರ್ವನಾಮದಿಂದ ಬರೇ ಮನುಷ್ಯಜಾತಿ ಬೋಧವಾಗುತ್ತದೆ. ಇದರ ಪ್ರಥಮಾ ವಿಭಕ್ತಿಯ ರೂಪವು=who ದ್ವಿತೀಯಾ=whom ಷಷ್ಠಿ=whose[4].

Those *who* are rich, are not always happy ಶ್ರೀಮಂತರಾಗಿರುವವರು ಯಾವಾಗಲೂ ಸುಖದಿಂದಿರುವದಿಲ್ಲ.

The man, whom you met this morning, went away to Mysore ನೀವು ಈ ಹೊತ್ತು ಬೆಳಿಗ್ಗೆ ಭೆಟ್ಟಿಯಾದ ಮನುಷ್ಯನು ಮೈಸೂರಿಗೆ ಹೊರಟು ಹೋದನು.

---

1) ಸಾಮಾನ್ಯವಾಗಿ ಗೊತ್ತಿರಬಹುದು is probably known. 2) At last he even sold himself. 3) But=(that not) ಎಂಬ ಶಬ್ದವನ್ನು ಸಹ ಒಮ್ಮೊಮ್ಮೆ ಸಂಬಂಧಾರ್ಥಕ ಸರ್ವನಾಮದಂತೆ ಉಪಯೋಗಿಸುವದುಂಟು. ಉದಾ-None is born but that has not to die ಸಾಯದ ಮನುಷ್ಯನು ಹುಟ್ಟುವದಿಲ್ಲ ಅಂದರೆ ಹುಟ್ಟಿದವರೆಲ್ಲ ಸಾಯತಕ್ಕವರೇ. 4) ಭಾಷಾಂತರ ಪಾಠಮಾಲೆಯ ಎರಡನೇ ಪುಸ್ತಕದ ೩೦ ನೇ ಪುಟ, ಕಲಮು ೬೦ ನೋಡು.

೮ Which ಎಂಬ ಸರ್ವನಾಮವನ್ನು ಉಳಿದ ಕಡೆಯಲ್ಲಿ ಪ್ರಯೋಗಿಸುವರು. ಉದಾ—

೧ The house, *which* you have bought, is large ನೀವು ಕೊಂಡ ಮನೆಯು ದೊಡ್ಡದು.

೯ ಒಮ್ಮೊಮ್ಮೆ which ಎಂಬ ಸರ್ವನಾಮವು ಇಡೀ ವಾಕ್ಯಕ್ಕೆ ಸಂಬಂಧಿಸಿರುತ್ತದೆ. ಇಂಥಲ್ಲಿ ಕನ್ನಡದೊಳಗೆ ಹೇಗೆ ಭಾಷಾಂತರ ಮಾಡಬೇಕೆಂಬುದನ್ನು ಕೆಳಗಿನ ಉದಾಹರಣೆಗಳಿಂದ ತಿಳಿದುಕೊಳ್ಳಬೇಕು.

The father ordered his children to go home *which* they did immediately ತಂದೆಯು ಮಕ್ಕಳಿಗೆ ಮನೆಗೆ ಹೋಗಿರೆಂದು ಅಜ್ಞಾಪಿಸಲು, ಅವರು ಕೂಡಲೇ ಹೋದರು.

He told me that he was a king, *which* I do not believe ಅತನು ತಾನು ಅರಸನೆಂದು ಹೇಳಿದನು, ಆದರೆ ನಾನು ಅದನ್ನು ನಂಬುವದಿಲ್ಲ.

☞ ಕನ್ನಡದಿಂದ ಇಂಗ್ಲಿಷದಲ್ಲಿ ಭಾಷಾಂತರ ಮಾಡುವಾಗ ಒಮ್ಮೊಮ್ಮೆ ಸಂಬಂಧಾರ್ಥಕ ಸರ್ವನಾಮವನ್ನು ಪ್ರಯೋಗಿಸಿ, ಪ್ರಧಾನ ವಾಕ್ಯವನ್ನು ಅಧೀನ ವಾಕ್ಯ ಮಾಡಬೇಕಾಗುತ್ತದೆ. ಉದಾ—

೧ ಓಣಿಯಲ್ಲಿ ನಾನು ಒಬ್ಬ ಮನುಷ್ಯನನ್ನು ಕಂಡೆನು. ಅವನು ಬಹಳ ಎತ್ತರವಾಗಿದ್ದನು. I saw a man in the street *who* was very tall.

೧೦ That ಎಂಬ ಸಂಬಂಧಾರ್ಥಕ ಸರ್ವನಾಮವನ್ನು ಮೂರೂ ಲಿಂಗಗಳಲ್ಲಿ ಪ್ರಯೋಗಿಸಬಹುದು.

The man, that was sitting here, is mad ಇಲ್ಲಿ ಕೂತಿದ್ದ ಮನುಷ್ಯನು ಹುಚ್ಚನು ಇರುವನು.

Those ladies, that you see there, are of the royal family ಅಗೋ ಅಲ್ಲಿ ಕಾಣುವ ಸ್ತ್ರೀಯರು ಅರಸು ಮನೆತನದವರು.

Where are the mangoes *that* you purchased this morning? ಈ ಹೊತ್ತು ಬೆಳಿಗ್ಗೆ ನೀನು ಕೊಂಡ ಮಾವಿನ ಹಣ್ಣುಗಳು ಎಲ್ಲಿ ಇವೆ ?

೧೧ **That** ಎಂಬ ಸಂಬಂಧಾರ್ಥಕ ಸರ್ವನಾಮಕ್ಕೆ ಉಪಸರ್ಗಾವ್ಯಯವು ಬೇಕಾದಾಗ ಆ ಅವ್ಯಯವನ್ನು ಸರ್ವನಾಮದ ಹಿಂದೆ ಇಡದೆ ವಾಕ್ಯದ ಕೊನೆಗೆ ಹಾಕಬೇಕು[1]. ಉದಾ—

**There is not a single sentence, in the play, *that* I do not know the meaning of** ಈ ನಾಟಕದಲ್ಲಿ ನನಗೆ ಅರ್ಥ ತಿಳಿಯದ ವಾಕ್ಯವು ಒಂದೂ ಇಲ್ಲ.

೧೨ **Which** ಎಂಬ ಸಂಬಂಧಾರ್ಥಕ ಸರ್ವನಾಮದ ಪೂರ್ವಗಾಮೀ ಶಬ್ದವು **that** ಎಂಬ ನಪುಂಸಕ ದರ್ಶಕ ಸರ್ವನಾಮವಿದ್ದರೆ, ಆ ಎರಡೂ ಶಬ್ದಗಳಿಗೆ ಬದಲಾಗಿ **what** ಎಂಬ ಸರ್ವನಾಮವನ್ನು ಹಾಕುತ್ತಾರೆ. ಉದಾ—

**Do *what* you like=do *that which* you like** ನಿನಗೆ ಇಷ್ಟವಾದುದನ್ನು ಮಾಡು.

೧೩ ಪೂರ್ವಗಾಮೀ ಶಬ್ದವು **such** ಎಂಬ ದರ್ಶಕ ಸರ್ವನಾಮವಿದ್ದರೆ, **as** ಎಂಬ ಸಂಬಂಧಾರ್ಥಕ ಸರ್ವನಾಮವನ್ನು ಉಪಯೋಗಿಸಬೇಕು. ಉದಾ—

**Choose such friends *as* you can trust** ನೀನು ನಂಬಿಗೆ ಇಡಲು ಯೋಗ್ಯರಾದ ಸ್ನೇಹಿತರನ್ನು ಆರಿಸು.

**His behaviour was such *as* could not be pardoned** ಅವನ ನಡತೆಯು ಅಕ್ಷಮ್ಯವಾದದ್ದು.

೧೪ ಸಂಬಂಧಾರ್ಥಕ ಸರ್ವನಾಮವು **objective case** ದಲ್ಲಿದ್ದಾಗ ಅದು ವಿಕಲ್ಪವಾಗಿ ಗುಪ್ತವಾಗಿರಬಹುದು. ಹೀಗೆ ಗುಪ್ತವಿದ್ದಾಗ ಅದಕ್ಕೆ ಉಪಸರ್ಗಾವ್ಯಯವಿದ್ದರೆ, ಅದನ್ನು ಕ್ರಿಯಾಪದದ ಮುಂದೆ ಹಾಕುವರು. ಉದಾ—

**This is the book I was reading** ನಾನು ಓದುತ್ತಿದ್ದ ಪುಸ್ತಕವು ಇದೇ.

**I saw the man you were talking *of*** ನೀವು ಹೇಳುತ್ತಿದ್ದ ಮನುಷ್ಯನನ್ನು ನಾನು ನೋಡಿದೆನು.

ಇವೆರಡರಲ್ಲಿ ಮೊದಲನೇ ವಾಕ್ಯದೊಳಗೆ **that** ಅಥವಾ **which** ಎಂಬದೂ ಎರಡನೇದರೊಳಗೆ **whom** ಎಂಬದೂ ಗುಪ್ತವಿದೆ.

---

1) ಈ ನಿಯಮವು ಉಳಿದ ಸಂಬಂಧಾರ್ಥಕ ಸರ್ವನಾಮಗಳಿಗೂ ಹತ್ತುತ್ತದೆ. ಆದರೆ ಅಗ ಉಪಸರ್ಗಾವ್ಯಯವನ್ನು ವಾಕ್ಯದ ಕೊನೆಗೆ ಹಾಕುವದು ಅವಶ್ಯ ಉಂಟೆಂದು ಹೇಳಕೂಡದು.

## ೧೫ ಶಬ್ದಸಂಗ್ರಹ ೨.

| | | | |
|---|---|---|---|
| Vac'ci-nate' | ವೈಲಿ ತೆಗೆ. | To graze | ಮೇಯು (ಹುಲ್ಲು) |
| Tho'roughly | ಸಂಪೂರ್ಣವಾಗಿ, ಸಾದ್ಯಂತವಾಗಿ, ನಿಶ್ಶೇಷವಾಗಿ | A con-di'tion | ಕರಾರು, ನಿಬಂಧನೆ, ಪರಿಸ್ಥಿತಿ, ನಿಯಮ. |
| To dis-like' | ಮೆಚ್ಚದಿರು, ಸೇರದಿರು, ಅಸಹ್ಯಪಡು, ಬೇಸರಾಗು. | An object | ೧ ಉದ್ದೇಶ, ಹೇತು; ಗುರಿ; ೨ ಪದಾರ್ಥ; ೩ ಕರ್ಮಪದ. |
| An ad-ven'ture | ಸಾಹಸ, ದಿಟ್ಟತನ. | Un-known' | ಅಪ್ರಸಿದ್ಧವಾದ, ಅಪರಿಚಿತ, ಗೊತ್ತಿಲ್ಲದ. |
| To under-take | ಕೈಕೊಳ್ಳು. | | |
| A voy'age | ಜಲಪರ್ಯಟನ, ಸಮುದ್ರಪ್ರಯಾಣ. | To re-gain | ತಿರುಗಿ ಸಂಪಾದಿಸು, ಮತ್ತೆ ಸ್ವಾಧೀನಕ್ಕೆ ಪಡೆ. |
| To re-late | ವಿವರಿಸು, ಹೇಳು, | Mis-con'duct | ಕೆಟ್ಟ ನಡತೆ, ದುರ್ವರ್ತನೆ. |
| ಇನಾಮು ಕೊಡು, ಬಹುಮಾನ ಕೊಡು | to pre-sent'. | ದ್ರಾಕ್ಷ | a grape. |
| ಸಹಾಯ, ಒತ್ತಾಸೆ, ನೆರವು ಕುಮ್ಮಕ್ಕು | as-sist'ance | ಹೊಳೆಯುವ, ಕಾಂತಿಯುಳ್ಳ, ತೇಜಸ್ಸುಳ್ಳ, ಥಳಥಳಿಸುವ | bright, bril'iant. |
| ಹೂವಿನ ಗಿಡ | a flow'er-tree. | ಸೇತುವೆ, ಸಂಕ | a bridge. |
| ದೃಷ್ಟಿಗೆ ಬೀಳು, ನೋಡು | to see, to be-hold. | (ಹಂ) ಹಗ್ಗ ಮು. ಂತಾದದ್ದು | to give way, to break. |
| ಆಶ್ಚರ್ಯಕರವಾದ, ಚಮತ್ಕಾರವುಳ್ಳ, ವಿಲಕ್ಷಣ, ತಿಳಿಯಲಾಶಿಸುವ | won'der-ful, cu'ri-ous. | ಸಿಂಹಲದ್ವೀಪ | The is'land of Cey-lon. |
| ಬಂಧುಬಳಗದವರು, ನೆಂಟರು | re-la'tions, re-la'tives | ತೊದಲಿಸು, ಉಗ್ಗು ಗುಕ್ಕಿ ಮಾತಾಡು | to stam'mer. |

This morning — ಈವೊತ್ತು ಬೆಳಿಗ್ಗೆ.

To take a walk — ತಿರುಗಾಡಲಿಕ್ಕೆ ಹೋಗು.

To pro-pose' terms — ಕರಾರು ಹೇಳು.

To con-sist' of — ಇರು, ಉಂಟಾಗಿರು, ಒಳಗೊಂಡಿರು.

To com-ply with, to con-sent' to — ಒಪ್ಪಿಕೊಳ್ಳು, ಸಮ್ಮತಿಪಡು.

To under-take' a voy'age — ಜಲಪರ್ಯಟನ ಮಾಡು, ಕೈಕೊಳ್ಳು.

ಬಹಳ ಉಪಕಾರಬದ್ಧನಾಗಿರು, ಅಭಾರಿಯಾಗು — to be much obliged to.

## ಭಾಷಾಂತರಪಾಠ ೨.

೧. A man *who* does not fear God, cannot be happy. Is this the gentleman, *whose* horse was frightened[1] this morning? He is one of the few persons, *whom* I throughly dislike. Who were those ladies, *with whom* you took a walk this morning? He had four children *of whom* the eldest was not then more than twelve years old. There are many poor people *whose* whole dinner consists of a piece of dry bread and drink of water. Here is the person *to whom* I paid the money, *which* you gave me. The chair *which* stands before[2] the window was presented to me by my uncle. What has become of the letters, *which* I put on my table this morning? I saw a large tree, the branches *of which* hung down to[3] the ground. You propose terms, *with which* I do not comply. These are the conditions *to which* I shall never consent. You have paid your debts, *which* is a clear proof of your honesty. Columbas undertook many voyages, the object *of which* was to discover unknown contries. It is difficult to regain the riches *which* we have lost by our own misconduct. He was told to relate some of his adventures, *which* he did immediatly. The baby, *which* was vaccinated last week, is doing well. The horse *which* is grazing in the field, belongs to my cousin. Who is there *but* commits errors[4]? The pen, *whose* point was broken, has been mended.

ನಾನು ಹೇಳುತ್ತಿದ್ದ ಗೃಹಸ್ಥನು ಈತನೇ. ನಾನು ನಿಮಗೆ ತೋರಿಸಿದ ಪುಸ್ತಕಗಳನ್ನು ನಮ್ಮ[5] ಶಿಕ್ಷಕನು ನನಗೆ ಇನಾಮು ಕೊಟ್ಟನು. ನೀವು ನನಗೆ ಸಹಾಯ ಮಾಡಿದ್ದರಿಂದ ನನ್ನ ಮೇಲೆ ನಿಮ್ಮ ಉಪಕಾರವು ಬಹಳವಾಗಿದೆ. ನನ್ನ ವಿಷಯವಾಗಿ ನಿನಗೆ ಹೀಗೆ ಹೇಳಿದ ಮನುಷ್ಯನು ರಾಮನಿಗಾದರೂ ಹೀಗೆ ಹೇಳುವನು. ಉನ್ನತವಾದ[6] ಪರ್ವತಗಳ ಮೇಲೆ ಬೆಳೆಯುವ ಗಿಡಗಳು ಎತ್ತರ[7] ಇರುವದಿಲ್ಲ. ನಾವು ಅವನ ಬಳಿಯಲ್ಲಿ ನೋಡಿದ ಪುಸ್ತಕಗಳು ಅವನವಲ್ಲ. ನೀವು ಅಲ್ಲಿ

1) ಬೆದರಿಸು. 2) ಎದುರಿಗೆ. 3) ವರೆಗೆ. 4) ತಪ್ಪು ಮಾಡದವರು, but=that not. 5) My. 6) Hill. 7) High, lofty.

ನೋಡಿದಂಥ ಹೂವಿನ ಗಿಡಗಳು ನಮ್ಮ ತೋಟದಲ್ಲಿ ಅನೇಕವುಂಟು. ನನಗೆ ಗೊತ್ತಿದ್ದದ್ದನ್ನು ನಾನು ನಿನಗೆ ಹೇಳುವೆನು. ನಾನು ಮಾತಾಡಿದ್ದು ಅವನ ಮನಸಿಗೆ ಬರಲಿಲ್ಲ. ನಾನು ಇರುವ ಮನೆಯು ನನ್ನ ಸ್ವಂತ ಮನೆಯಲ್ಲ. ನಾವು ಓದುವಂಥ, ಕೇಳುವಂಥ ಹೊಸ ಹೊಸ ಚಮತ್ಕಾರಗಳಲ್ಲಿ ಕೆಲವು ನಮ್ಮ ದೃಷ್ಟಿಗೆ ಬೀಳುತ್ತವೆ. ನಮ್ಮ ಮೇಲೆ ಪ್ರೀತಿ ಮಾಡುವ ತಂದೆತಾಯಿಗಳನ್ನೂ ಬಂಧುಬಳಗದವರನ್ನೂ ನಾವು ನೋಡುತ್ತೇವೆ. ಹಿಂದೂ ಜನರು ಲಂಕಾ ಎಂದು ಹೆಸರಿಟ್ಟ ಸಿಂಹಲದ್ವೀಪದಲ್ಲಿ ದಾಲಚಿನ್ನೀ ಗಿಡಗಳು ಹೇರಳವಾಗಿ ಬೆಳೆಯುತ್ತವೆ[1]. ಪೃಥ್ವಿಯ ಮೇಲಿನ ಯಾವತ್ತು ಸುಂದರವಾದ ತೇಜಸ್ಸುಳ್ಳ ಒಡವೆಗಳಿಗಿಂತ ನಾನು ಅತಿ ಸುಂದರನೂ, ತೇಜಸ್ಸುಳ್ಳವನೂ ಇದ್ದೇನೆ. ಪಟ್ಟಣದೊಳಗೆ ಹೋಗುವ ಮಾರ್ಗದಲ್ಲಿರುವ ಸೇತುವೆಯ ಮೇಲಿಂದ ಅವರು ನಡೆದಿದ್ದರು[2]. ಎತ್ತಿನ ಕಾಲುಗಳನ್ನು ಕಟ್ಟಿದ ಹಗ್ಗವು ಹರಿಯಿತು. ನಿಮ್ಮ ಬೀಗನಾದ ರಂಗನು ತೊದಲಿಸು (ಗುಕ್ಕು) ತ್ತಾನೇನು ?

### ೧೭ ಶಬ್ದಸಂಗ್ರಹ ೩.

| | | | |
|---|---|---|---|
| Free | ಸ್ವತಂತ್ರ, ಅನಿಯಂತ್ರಿತ. | To gain | ಸಂಪಾದಿಸು, ದೊರಕಿಸು, |
| To sub-due' | ಜಯಿಸು, ವಶಮಾಡಿಕೊಳ್ಳು. | To save | ಉಳಿಸು, ಕಾಯು, ರಕ್ಷಿಸು. |
| Ago[3] | ಪೂರ್ವದಲ್ಲಿ, ಹಿಂದೆ, ಮುಂಚೆ. | Slan'der<br>Slan'derer | ಚಾಡಿ, ನಿಂದೆ, ದೂರು<br>ಚಾಡಿಕೋರ, ನಿಂದಕ. |
| A sense | ಇಂದ್ರಿಯ, ಜ್ಞಾನೇಂದ್ರಿಯ, ವಿವೇಕ, ಬುದ್ಧಿ. | Sat-isfactory | ಮನಸ್ಸಿನ ತಕ್ಕ, ತೃಪ್ತಿಕರ, ಸಮಾಧಾನಕಾರಕ |
| A pas'sion | ಮನೋವಿಕಾರ. | To smoke | ಹೊಗೆಹೊರಡು, ಹಾಯು, ಧೂಮ್ರಪಾನ ಮಾಡು. |
| To trouble | ತೊಂದರೆ ಕೊಡು. | A mo'ment | ಕ್ಷಣ, ನಿಮಿಷ. |
| Trouble-some | ತೊಂದರೆಯುಳ್ಳ, ತ್ರಾಸದಾಯಕ. | A seat | ಆಸನ, ಪೀಠ, |
| A deed | ಕೃತ್ಯ, ಕಾರ್ಯ, ಕೆಲಸ. | An ac-count' | ವೃತ್ತಾಂತ, ಲೆಕ್ಕ, ಹೇಳಿಕೆ. |
| Oth'ers | ಪರರು, ಎರಡನೇಯವರು. | A chim'ney | ಹೊಗೆಕಿಂಡಿ, ಹೊಗೆ ನಳಿಕೆ. |
| To own | ೧ ತನ್ನದು ಅನ್ನು, ೨ ಒಪ್ಪಿಕೊಳ್ಳು. | ಹುಟ್ಟಿಸು, ನಿರ್ಮಿಸು<br>ತೆಂಕಣ, ದಕ್ಷಿಣ | to cre-ate'.<br>south, southern. |
| ದುರ್ದೈವದಿಂದ | un-for'tu-nately. | ಸುಲಿ | to stripp off, to peel. |
| ಇಂಗ್ಲಂಡದೇಶ | Engalnd. | ತಾಳು, ಸಾಕಾಗು | to last. |
| ಜನ್ಮ<br>ಮದುವೆ | birth.<br>marriage. | ಬುರುಸುಗಟ್ಟು | to become' moul'dy. |
| ಮದುಮಗಳು, ವಧು<br>ಮದುಮಗನು, ವರ | a bride.<br>a bride'groom. | ದಾನ, ವರ, ಕೊಟ್ಟ ವಸ್ತು, ಕೊಡುಗೆ, ದತ್ತಿ | a gift. |

1) Grown in abundance. 2) They were passing over the bridge which was on the road leading to the town. 3) ಈ ಶಬ್ದವು ಕಾಲವಾಚಕ ನಾಮದ ಮುಂದೆ ಬರುತ್ತದೆ.

| | | | |
|---|---|---|---|
| ಗುರುತು, ಸನ್ನೆ, ಚಿನ್ಹ | a sign. | ನಾರ್ವೇದೇಶ | nor'way. |
| ಅಭಿತೋರಿಸು, ಸೂಚಿಸು | to express'. | ಮನುಷ್ಯಜಾತಿ | man'kind. |
| ತಿಳಿಸು, ಅರುಹು | to com-mu'ni-cate, | ಬುದ್ಧಿ, ವಿಚಾರಶಕ್ತಿ | rea'son, In'tel lect. |

To put off till to-mor'row — ನಾಳಿಗೆ ಹಾಕು.

To give ear to — ಕಿವಿಗೊಡು (ಮಾತಿನ ಕಡೆಗೆ) ಲಕ್ಷಗೊಡು

For cer'tain=cer'tainly — ನಿಜವಾಗಿ, ಖಂಡಿತವಾಗಿ.

The oth'er day, on the other day ಮೊನ್ನೆ ಆ ದಿವಸ, ಕೆಲವು ದಿವಸಗಳ ಹಿಂದೆ

To turn out to (ಅಕ.) ಮೊದಲು ಸಂಶಯಪಿದ್ದು ಅನುಭವದ ಮೇಲೆ ಚಲೋದು ಇಲ್ಲವೆ ಕೆಟ್ಟದು ಆಗು, ಹೊರಡು; (ಸಕ.) ಹೊರಗೆ ಹಾಕು.

| | |
|---|---|
| ಕೊರತೆ ಇರು, ಬೇಕಾಗಿರು | to want, to be with-out. |
| (ಇಂತ) ಹೆಚ್ಚು ಮನಸ್ಸಿಗೆ ಬರು | to like bet'ter than, to pre-fer' to. |
| ಇಷ್ಟು ಹೊತ್ತಿನ ವರೆಗೆ | up to this time, so long. |
| ಗಿಡ ಹಚ್ಚು,—ಊರು | to plant a tree. |
| ಬಹಳ ದಯೆಯಿಂದ, ಕರುಣೆಯಿಂದ | very kindly. |

## ಭಾಷಾಂತರಪಾಠ ೩.

೧೮ No man is free *that* has not subdued his passions. Nothing is troblesome *that* we do willingly. This is the worst crime *that* a man can be guilty of. Never trouble others to do for you *what* you can do yourself. Pay *what* you owe and[1] you will know *what* you own. It is not *what* we gain but *what* we save *that* makes rich[2]. Never put off till tomorrow *what* you can do to-day. Such people as give ear to slander, are themselves as[3] bad as[3] slanders. Read only such books *as* are good. The lady, those people are talking of, is my cousion. I never speak of things I do not know for certain. The horse, my brother bought the other day, turned out exceedingly satisfactory. He was turned out of the school for his misconduct. There was no one present *but* saw the deed. The moment[4] they heard me[5] they rose from their seats. I will give you an account of *what* I have seen since that time. This is not such a book as I expected. It was a handsome mansion *of which* chimneys never smoked.

1) ಅಂದರೆ. 2) ಆದರಿಂದ ನಾವು ಶ್ರೀಮಂತರಾಗುತ್ತೇವೆ. 3) ಇವು ಕ್ರಿಯಾ ವಿಶೇಷಣಗಳು = ಅಷ್ಟೇ. 4) The moment=at the moment = ಆ ಕ್ಷಣವೇ, 5) ನನ್ನ ಮಾತು.

ಸುಮಾರು ನೂರು ವರ್ಷಗಳ ಆಚೆ[1] ಇಂಗ್ಲಂಡಿನಲ್ಲಿ ಒಬ್ಬ ಸರದಾರನಿದ್ದನು. ಆತನಿಗೆ ಹುಟ್ಟು ಕಿವಡಿಯೂ ಮೂಕಿಯೂ ಆದ ಒಬ್ಬ ಮಗಳಿದ್ದಳು. ಮದುವೆಯ ಸಮಯದಲ್ಲಿ ಮದುಮಗಳು ಆಡತಕ್ಕ[2] ಮಾತುಗಳನ್ನು ಆಕೆಯು ಸನ್ನೆ ಮಾಡಿ ತೋರಿಸುವಳು[3]. ಮದುಮಗಳು ಕೇಳತಕ್ಕ ಮಾತುಗಳನ್ನು ಮದುಮಗನೂ ಉಪಾಧ್ಯಾಯರೂ ಆಕೆಗೆ ಸನ್ನೆಗಳಿಂದ ತಿಳಿಸಿದರು[4]. ಕೆಲವು ವರ್ಷಗಳಾದ ಬಳಿಕ ಆಕೆಗೆ ಒಂದು ಕೂಸು ಹುಟ್ಟಿತು[5]. ಅದರ ಮೇಲೆ ಆಕೆಯು ಜೀವಪ್ರಾಣ ಮಾಡು ತ್ತಿದ್ದಳು[6]. ದುರ್ದೈವದಿಂದ ನನಗೆ ಇಲ್ಲದ ಇಂದ್ರಿಯವನ್ನು ದೇವರು ನನ್ನ ಕೂಸಿಗೆ ಕೊಟ್ಟಿದ್ದಾನೆ. ರೊಟ್ಟಿ ಎಂಬ ಪದಾರ್ಥವು ತಿನ್ನಲಿಕ್ಕೆ ಒಳ್ಳೇದು. ಮೊಲಕ್ಕಾ ನಡುಗಡ್ಡೆಗಳಲ್ಲಿರುವ ಜನರು ಭೂಮಿ ಸಾಗು ಮಾಡುವದಿಲ್ಲ, ಹಾಗು[7] ಬೀಜಾ ಬಿತ್ತುವದಿಲ್ಲ. ದಕ್ಷಿಣ ಸಮುದ್ರದೊಳಗಿನ ನಡುಗಡ್ಡೆಗಳಲ್ಲಿರುವ ಜನರ ಸಲುವಾಗಿ ದೇವರು ಅಲ್ಲಿ ವಿಲಕ್ಷಣವಾದ ಗಿಡಗಳನ್ನು ಹುಟ್ಟಿಸಿದ್ದಾನೆ; ಅವುಗಳಿಗೆ ಕೆಲವರು ರೊಟ್ಟೀ ಗಿಡಗಳು ಅನ್ನುತ್ತಾರೆ. ನಾರ್ವೇ ದೇಶದ ಜನರು ಮಾಡುವ ರೊಟ್ಟಿಯು ಮೂವತ್ತು ನಾಲ್ವತ್ತು[8] ವರುಷ ತಾಳುತ್ತದೆ. ಬಹಳ ಹಳೇದಾಗಿಯೂ ಬುರುಸು ಗಟ್ಟಿದ್ದಾಗಿಯೂ ಇರುವ ರೊಟ್ಟಿಯು ಆ ಜನರಿಗೆ ಹೊಸ[9] ರೊಟ್ಟಿಗಿಂತ ಹೆಚ್ಚು ಸೇರುತ್ತದೆ. ಈ ಗಿಡಗಳು ಬೆಳೆಯದ ದೇಶಗಳಿಗೆ[10] ಇವುಗಳ ಕಾಯಿಗಳನ್ನು ಕಳುಹು ತ್ತಾರೆ. ನಾನು ಇದುವರೆಗೆ ತಿಂದ ಅಕ್ರೋಡದ[11] ಗಿಡಗಳನ್ನು ನಾನೇ ಹಚ್ಚಿದ್ದೇನೋ? ರಾಮನು ಮಾತಾಡಿದ್ದು ನನ್ನ ಜ್ಞಾಪಕದಲ್ಲಿ ಇಲ್ಲ. ನಮ್ಮ ತಂದೆತಾಯಿಗಳೂ ಶಿಕ್ಷಕರೂ ನಮಗೆ ಹೇಳಿದ್ದನ್ನು ನಾವು ಮಾಡುತ್ತೇವೆ. ದೇವರು ಬಹಳ ದಯೆ ಯಿಂದ ಮನುಷ್ಯಜಾತಿಗೆ ಕೊಟ್ಟ[12] ಮೇಲಾದ ವಸ್ತುಗಳಲ್ಲಿ[13] ಬುದ್ಧಿಯು ಒಂದು. ಅಹಾ! ಅವ ಎಂಥ ಗೆಳೆಯ! ದಿನಾಲು ನನಗೆ ಅಣಕಿಸುತ್ತಾನೆ. ನಿನ್ನ ಗೆಳೆಯರ ಮೇಲೆ ಮಾಡುವಂತೆ ಹಗೆಗಳ ಮೇಲೆ ಸಹ ಉಪಕಾರ ಮಾಡುತ್ತ ಬಾ, ಎಂದು ನಮ್ಮ ಗುರುಗಳು ನನಗೆ ಉಪದೇಶಿಸಿದರು.

---

1) About a hundred years ago. 2) Are to be said, must be said. 3) Were expressed by her by means of signs. 4) Were communicated to her by means of signs. 5) She gave birth to a child. 6) Whom she loved as her own life. 7) Nor. 8) Thirty or forty. 9) Fresh. 10) To those countries, where. 11) The fruit of which. 12) ಕೊಡು to bestow on ಅಥವಾ upon. 13) Of the gifts.

## ೩ ನೇ ಪಾಠ.

## The Infinitive Mood.

೧೯ ಇಂಗ್ಲಿಷದಲ್ಲಿ ಕ್ರಿಯಾಪದದ ಮೂಲರೂಪದ ಹಿಂದೆ to ಎಂಬ ಉಪಸರ್ಗಾವ್ಯಯವನ್ನು ಹಚ್ಚುವದರಿಂದ Infinitive Mood (ಕ್ರಿಯಾವಾಚಕ) ಆಗುತ್ತದೆ. ಇದರಿಂದ ಬಹುತರ ಕನ್ನಡದೊಳಗಿನ ಕ್ರಿಯಾನಾಮದ ಅರ್ಥ ಹೊರಡುತ್ತದೆ.

ಉದಾ—To read ಓದುವದು, ಓದೋಣ.
To learn ಕಲಿಯುವದು, ಕಲಿಯೋಣ.

೨೦ ಮೇಲೆ ಹೇಳಿದ Infinitive Mood (ಕ್ರಿಯಾವಾಚಕ) ಕ್ಕೆ ಪ್ರಥಮಾ, ದ್ವಿತೀಯಾ, ಚತುರ್ಥಿ ಇವುಗಳ ಹೊರತು ಬೇರೆ ವಿಭಕ್ತಿಗಳು ಹತ್ತುವದಿಲ್ಲ. ಮತ್ತು ಅದರ ಬಹುವಚನವು ಆಗುವದಿಲ್ಲ.

ಟಿಪ್ಪಣಿ—Infinitive Mood (ಕ್ರಿಯಾವಾಚಕ) ಕ್ಕೆ ಆಖ್ಯೆ ಇರುವದಿಲ್ಲಾದ್ದರಿಂದ ಪುರುಷ ವಚನಗಳು ಹತ್ತುವದಿಲ್ಲ.

೨೧ ಉದ್ದೇಶ್ಯ ಇಲ್ಲವೆ ವಿಧೇಯ ಸ್ಥಾನದಲ್ಲಿ ಈ ಕ್ರಿಯಾವಾಚಕಗಳಿದ್ದರೆ, ಇವು ಪ್ರಥಮಾ ವಿಭಕ್ತಿಯಲ್ಲಿವೆ ಎಂದು ತಿಳಿದುಕೊಳ್ಳಬೇಕು.

ಉದಾ—To *lie* is a sin — ಸುಳ್ಳಾಡುವದು ಪಾಪವು.
My duty is to *assist* you — ನಿನಗೆ ಸಹಾಯ ಮಾಡುವದು ನನ್ನ ಕರ್ತವ್ಯವು.

೨೨ ☛ ಇಂಥ ವಾಕ್ಯಗಳೊಳಗೆ ಕರ್ತೃ ಸ್ಥಾನದಲ್ಲಿ it ಎಂಬ ದರ್ಶಕ ಸರ್ವನಾಮವನ್ನು ಪ್ರಯೋಗಿಸಿ, ಕ್ರಿಯಾವಾಚಕವನ್ನು ಕಡೆಗೆ ಹಾಕುವ ರೂಢಿಯು ಬಹಳ ಉಂಟು.

ಉದಾ—*It* is a sin *to lie* ಸುಳ್ಳಾಡುವದು ಪಾಪವು.
*To be attentive and diligent* is the duty of every student ಅಥವಾ *It* is the duty of every student *to be attentive and diligent* ಲಕ್ಷ್ಯ ಕೊಡುವವನೂ ತತ್ಪರನೂ ಆಗಿರುವದು ಪ್ರತಿ ಒಬ್ಬ ವಿದ್ಯಾರ್ಥಿಯ ಕರ್ತವ್ಯವು.

*To be so* is not proper for you, ಅಥವಾ *It* is not proper for you *to do so* ನೀನು ಹಾಗೆ ಇರುವದು ಹೀಗೆ ಮಾಡುವದು ಸರಿಯುಲ್ಲ.

೨೩ ಕರ್ಮಸ್ಥಾನದಲ್ಲಿ ಈ ಕ್ರಿಯಾವಾಚಕಗಳಿದ್ದಾಗ, ಇವು ದ್ವಿತೀಯಾ ವಿಭಕ್ತಿಯಲ್ಲಿವೆ ಎಂದು ತಿಳಿದುಕೊಳ್ಳಬೇಕು.

ಉದಾ—He learns *to read* ಅವನು ಓದು ಕಲಿಯುತ್ತಾನೆ.

೨೪ ಕ್ರಿಯಾವಾಚಕವು ಕರ್ತೃಪದವಾಗಲಿ ಕರ್ಮಪದವಾಗಲಿ ಇಲ್ಲದಾಗ ಅದು ಚತುರ್ಥೀ ವಿಭಕ್ತಿಯಲ್ಲಿದೆ ಎಂದು ತಿಳಿದುಕೊಳ್ಳಬೇಕು. ಆಗ ಅದು ಒಂದು ನಾಮಪದಕ್ಕಾಗಲಿ, ವಿಶೇಷಣಕ್ಕಾಗಲಿ, ಕ್ರಿಯಾಪದಕ್ಕಾಗಲಿ ಸಂಬಂಧಿಸಿರುತ್ತದೆ. ಇಂಥಲ್ಲಿ ಚತುರ್ಥಿಯ ಅರ್ಥವು ಕಾರಣ ಇಲ್ಲವೆ ಹೇತುವನ್ನು ಸೂಚಿಸುತ್ತದೆ. ಉದಾ—

| | |
|---|---|
| Is their *nothing to eat?* | ತಿನ್ನಲಿಕ್ಕೆ ಏನೂ ಇಲ್ಲವೋ? |
| I am *ready to come* with you | ನಿನ್ನ ಸಂಗಡ ಬರಲಿಕ್ಕೆ ನಾನು ಸಿದ್ಧನಿದ್ದೇನೆ. |
| You *come to learn* | ನೀವು ಕಲಿಯಲಿಕ್ಕೆ ಬರುತ್ತೀರಿ. |
| Chairs are *to sit upon*[1] | ಕುರ್ಚಿಗಳು ಕೂಡ್ರಲಿಕ್ಕೆ ಮಾಡಿರುತ್ತವೆ. |
| I *told* him a story *to amuse* him | ಅವನ ಮನರಂಜನೆಗಾಗಿ ನಾನು ಅವನಿಗೆ ಒಂದು ಕಥೆ ಹೇಳಿದೆನು. |

೨೫ ಇಂಗ್ಲೀಷಿನೊಳಗಿನ Infinitive Mood ಕ್ಕೆ ಬದಲಾಗಿ ಕನ್ನಡದೊಳಗೆ ಕೆಲವು ಕಡೆಯಲ್ಲಿ ವಾಕ್ಯವನ್ನು ಹಾಕಿದರೂ ಸಾಗುತ್ತದೆ. ಉದಾ—

| | |
|---|---|
| He *told* me *to go* home | ಮನೆಗೆ ಹೋಗೆಂದು ಅವನು ನನಗೆ ಹೇಳಿದನು. |
| He *promised to come* tomorrow | ನಾಳೆ ಬರುತ್ತೇನೆಂದು ಅವನು ವಚನ ಕೊಟ್ಟನು. |
| He wishes me *to do that* work | ಆ ಕೆಲಸ ನಾನು ಮಾಡಬೇಕೆಂದು ಅವನ ಮನಸ್ಸುಂಟು, ಇಚ್ಛೆಯುಂಟು. |

೨೬ ಇಂಗ್ಲೀಷಿನಲ್ಲಿ ಕ್ರಿಯಾವಾಚಕಗಳು ಎರಡು ವಿಧವು— ಕರ್ತರಿ, ಕರ್ಮಣಿ; ಇದಲ್ಲದೆ ಒಂದೊಂದರಲ್ಲಿ ಹಲವು ಪ್ರಕಾರಗಳುಂಟು.

**ಕರ್ತರಿ**

| | | |
|---|---|---|
| ಅನಿಯಮಿತ ಕ್ರಿಯಾವಾಚಕ: | to write | ಬರೆಯುವದು, ಬರೆಯೋಣ. |
| ಅಪೂರ್ಣ ಕ್ರಿಯಾವಾಚಕ: | to be writing | ಬರೆಯುತ್ತಿರುವದು. |
| ಪೂರ್ಣ ಕ್ರಿಯಾವಾಚಕ: | to have written | ಬರೆದಿರುವದು. |
| ನಡೆಯುವ ಪೂರ್ಣ ಕ್ರಿ. ವಾ. | to have been writing | ಕೆಲವು ಹೊತ್ತಿನಿಂದ ಬರೆಯುತ್ತಿರುವದು. |

**ಕರ್ಮಣಿ**

| | | |
|---|---|---|
| ಅನಿಯಮಿತ ಕ್ರಿಯಾವಾಚಕ: | to be written | ಬರೆಯಲ್ಪಡುವದು. |
| ಪೂರ್ಣ ಕ್ರಿಯಾವಾಚಕ: | to have been writing | ಬರೆಯಲ್ಪಟ್ಟಿರುವದು. |

1) To sit upon ಎಂಬದು made ಎಂಬ ಅಧ್ಯಾಹೃತ ಶಬ್ದಕ್ಕೆ ಸಂಬಂಧಿಸಿದೆ.

## ೨೭ ಶಬ್ದಸಂಗ್ರಹ ೪.

Ve'he-ment {ಆವೇಶವುಳ್ಳ, ಬಲವಾದ, ರಭಸದ. Fel'low-men ಬಾಂಧವರು.

Hu'man ಮನುಷ್ಯ, ಮಾನವ. Di-vine' ದೇವರ, ದೈವಿಕ.

A-gree'a-ble {ಸುಖಕರವಾದ, ಇಂಪಾದ, ಮನೋಹರವಾದ, ಒಪ್ಪಿಕೊಳ್ಳಬಹುದಾದ. An in-qui'ry {ವಿಚಾರಣೆ, ಶೋಧ, ಪ್ರಶ್ನೆ, ತನಿಖೆ

To re-veal' ಪ್ರಕಟಿಮಾಡು, ಹೊರಗೆಡ

A bul'lock-cart ಎತ್ತಿನಬಂಡಿ, ಗಾಡಿ. A fact ನಡೆದ ಸಂಗತಿ, ವಸ್ತುಸ್ಥಿ

To scorn ಜರಿ, ತಿರಸ್ಕರಿಸು, ಧಿಕ್ಕರಿಸು.
A'ble ಸಮರ್ಥ. Pre'tty, nice {ಚೆಂದ, ಮಾಟವಾದ, ಚಲುವಾದ, ಅಂದವಾದ

Un-a'ble ಅಸಮರ್ಥ. A sight {ದೃಶ್ಯ, ನೋಟ, ನೋಡತಕ್ಕ ವಸ್ತು.

To spell ಶಬ್ದ, ವರ್ಣ ಕೂಡಿಸು. Crick'et {ಒಂದು ತರದ ಚೆಂಡು, ಚಪ್ಪಟೆ ದಾಂಡುವಿನ ಆಟ.

An ex'er-cise {ಪಾಠ, ಅಭ್ಯಾಸ. ಪ್ರಯೋಗ, ವ್ಯಾಯಾಮ.

A ghost ಪಿಶಾಚ, ದೆವ್ವ, ಭೂತ. Clev'er ಚತುರ, ಜಾಣ.
A plea'sure ಆನಂದ. A be-gin'ner ಹೊಸಬ.

To instruct' ಕಲಿಸು, ಉಪದೇಶಿಸು. To pro-fess {೧ ಜಂಭಬಡಿ, ೨ಬಾಯಿ ಆಡಿ ತೋರಿಸು, ೩ ಸ್ಪಷ್ಟವಾಗಿ ಹೇಳು.

ಶಕ್ಯ pos'sible. ಹೆಗ್ಗಣ a ban'dicoot.
ಅಶಕ್ಯ im-pos'sible.
ಅವಶ್ಯ necess-ary. (ಯಾವದಾದರೊಂದು) ಕೆಲಸ ಮಾಡುವದಕ್ಕೆ ತಪ್ಪು} to fail.

ಸಂತೋಷಪಡಿಸು. to please. ಮನಸ್ಸುಮಾಡು, ಯೋಚಿಸು, ಆಲೋಚನೆ ಇರು.} to intend'.

ಕಾಡು, ಪೀಡಿಸು {to tease, to vex, to an-noy'. ಸೂಚಿಸು to sug-gest.
ಶಕುನ an o'men'.

To be loud and ve'he-ment ಬಹಳ ಆವೇಶದಿಂದ ಒದರಿ ಮಾತಾಡು.
To be glad ಆನಂದಪಡು.
To believe' in ghosts ದೆವ್ವಗಳುಂಟೆಂದು ನಂಬುವದು.
To have a game at foot-ball[1] ಕಾಲುಚೆಂಡಿನಾಟಾ ಆಡು.
By no means, not at all ಇಲ್ಲೇ ಇಲ್ಲ, ಸ್ವಲ್ಪಾದರೂ ಇಲ್ಲ.

---

1) ಕುಂಬಳಕಾಯಿಯಷ್ಟು ದೊಡ್ಡ ಚೆಂಡನ್ನು ಕಾಲಿನಿಂದ ಒದ್ದು ಇಲ್ಲವೆ ಚಿಮ್ಮಿ ಆಡುವ ಒಂದು ತರದ ಆಟ.

To car'ry on a work — ಕೆಲಸ ಜರುಗಿಸು,–ಸಾಗಿಸು, ಮಾಡು.

To like best — {ತುಂಬಾ ಸೇರು, ಎಲ್ಲಕ್ಕೂ ಹೆಚ್ಚಿಗೆ ಮನಸಿಗೆ ಬರು, ಬಹಳ ಮೆಚ್ಚು.

To one's sat-isfac'tion — ಒಬ್ಬರ ಮನಸ್ಸಿನಂತೆ, ಮನಸ್ಸಿನ ತಕ್ಕ.

ವಾಡಿಕೆಗಿಂತ ಬೇಗ — ear'li-er than u'su'al.

ನೆನಪು ಮಾಡಿಕೋ, ಜ್ಞಾಪಿಸಿಕೊಳ್ಳು — to call to mind.

ಪರೀಕ್ಷೆ ಇಳಿ, ಉತ್ತೀರ್ಣನಾಗು — {to pass in an ex-am-ina'tion. to pass an ex-am-in-a'tion.

ಪರೀಕ್ಷೆ ಇಳಿಯದಿರು, ನಪಾಸು ಆಗು — to fail[1] in an ex-am-in-a'tion.

ನಿರೀಕ್ಷಿಸು, ದಾರೀ ನೋಡು, ಎದುರು ನೋಡು to expect'.

ಆಗುವದೆಂದು ನಂಬು, ಆಗುವ ಹಾಗೆ ಕಾಣು ಎಣಿಸು } to ex-pect'. to think.

## ಭಾಷಾಂತರಪಾಠ ೪.

೨೮. *To err* is human, *to forgive* divine. *To be loud and vehement,* is no sign of patriotism. It is *difficult to say* so. He *wishes to study* English. I am very *glad to hear* it. It is *difficult to do* this work. Do you *like to go* there? It is not very *agreeable to travel* in a bullock-cart. Good boys *scorn to tell* a lie. Last Monday many friends *came to drink* tea with us. The young squirrel is hurt and is *unable to run.* Who *taught you to read and write*[2]? It is a great thing for farmers *to be able to read and write*[3]. At school we *learn to read, write and spell.* I *want to buy* a good horse, Will you *help* me *to* do my exercise? Let us *go to meet* our friends. It is foolish *to believe* in ghosts. It is certainly a pleausre *to know* that we are esteemed by our fellow-men. I *do not come to answer inquires,* but *to reveal* facts. He was very *glad to see*[3] his old friends again. The father *ordered* his children *to go* home. Many flowers *are pretty to look at,* but are not fragrant. *Let us take a walk* through the town *to see*

---

1) To fail ಎಂಬದು ಅಕರ್ಮಕ ಕ್ರಿಯಾಪದವಿರುವದರಿಂದ to fail an examination ಎಂದು ಅನ್ನ ಕೂಡದು. 2) ಎರಡು ಅಥವಾ ಹೆಚ್ಚು ಕ್ರಿಯಾವಾಚಕಗಳು ಕೂಡಿ ಬರಲಾಗಿ ಅವುಗಳ ಅರ್ಥಗಳು ಪರಸ್ಪರ ವಿರೋಧವಾಗಿರದಿದ್ದರೆ, ಮೊದಲನೇದರದೊಂದು ಬಿಟ್ಟು ಉಳಿದವುಗಳ to ಒಮ್ಮೊಮ್ಮೆ ಲೋಪವಾಗುತ್ತದೆ, 3) ನೋಡಿ.

*the* sights of the place. Now *let us go* out of the town *to have* a game at foot-ball. I *do not like to play* at ball. I *prefer to take a walk* in the open fields. Do you *play* at cricket? Yes, I do, but I am by no means cleaver at it[1]; I am quite a beginner. Little girls *like* best *to play* with their dolls. *Let* your servant *go to* grocer's[2] *to get*[3] some coffee, tea and sugar. *Do you wish to become* a farmer? It is easier *to advise* others *to do* a thing than *to do* it ourselves. Your son *has* now *learnt to be* deligent. We *desire to have* a share in government[4] We *profess to be* lovers of justice. I found *it*[5] *difficult to under-stand him*[6]. He *told* the children many stories to *amuse* and *instruct* them. He carried on the work to his master's satisfaction.

ಇಂಥ ಹಾಡುಗಳನ್ನು ಕೇಳುವದು ನನಗೆ ಸೇರುತ್ತದೆ. ಬಂದರದಲ್ಲಿ ಎಷ್ಟೋ ಹಡಗಗಳು ಬಂದವೆ. ಅವುಗಳನ್ನು ನೋಡಲಿಕ್ಕೆ ಹೋಗೋಣ. ನನ್ನ ತಾಯಿ ನನಗೆ ಓದುಬರಹ ಕಲಿಸಿದಳು. ನಾವು ತೀವ್ರವಾಗಿ ಹೋಗಬೇಕೆಂದು ಬಯಸುತ್ತೇವೆ. ತೆಳ್ಳನೆಯ ಕಾಗದದ ಮೇಲೆ ಬರೆಯುವದು ಕಠಿಣವದೆ. ಹೀಗೆ ಮಾಡುವದು ಅವಶ್ಯವದೆ. ಹಾಗೆ ಆಗುವದು ಅಶಕ್ಯವು. ಈ ಕೆಲಸ ಮಾಡುವದು ಬಹಳ ಸುಲಭವದೆ. ಈ ಕೆಲಸವು ಮಾಡಲಿಕ್ಕೆ ಬಹಳ ಸುಲಭವದೆ. ನಾನು ಮನೆಗೆ ಹೋಗಬೇಕೆನ್ನುತ್ತೇನೆ. ನಾವು ಇಂಗ್ಲಿಷ ಕಲಿಯಬೇಕೆಂದು ಮನಸ್ಸಿನಲ್ಲಿ ಯೋಚಿಸಿದ್ದೇವೆ. ಎರಡನೇಯವರಿಗೆ ಬುದ್ಧಿ ಹೇಳುವದು ಸುಲಭ. (ತನ್ನ) ತಂದೆ ತಾಯಿಗಳನ್ನು ಸಂತೋಷಪಡಿಸಬೇಕೆಂದು ಆಕೆ ಹೀಗೆ ಮಾಡಿದಳು. ನಿಮ್ಮ ಕೂಡ ಮಾತಾಡಬೇಕೆಂದು ನಾವು ಇಲ್ಲಿಗೆ ಬಂದಿದ್ದೇವೆ. ನನ್ನನ್ನು ತಪ್ಪಿಸುವದಕ್ಕಾಗಿ ಅವನು ದಿನಕ್ಕಿಂತ[7], ಬೇಗ ಹೋದನು. ನನಗೆ ಬರೇ ತೊಂದರೆ ಕೊಡುವದಕ್ಕೆ ನೀನು ಇಲ್ಲಿಗೆ ಬಂದಿದ್ದೀ. ನಮ್ಮ ಹೆಣ್ಣು ಮಕ್ಕಳು ಕನ್ನಡ ಕಲಿಯಲಿಕ್ಕೆ ಸಾಲೆಗೆ

1) ಅದರಲ್ಲಿ. 2) ಇಂಗ್ಲಿಷದಲ್ಲಿ ಷಷ್ಠ್ಯಂತ ನಾಮದ ಮುಂದೆ house ಅಥವಾ shop ಎಂಬ ಶಬ್ದವನ್ನು ಲೋಪ ಮಾಡುವ ರೂಢಿಯುಂಟು. 3) (ಕೊಂಡು) ತಾ. 4) ರಾಜ್ಯ ನಡಿಸುವದರಲ್ಲಿ ನಮ್ಮ ಅಂಗವಿರಬೇಕೆಂದು ನಾವು ಬಯಸುತ್ತೇವೆ. 5) ಈ ವಾಕ್ಯದಲ್ಲಿ it ಎಂಬ ಸರ್ವನಾಮವು it understand him ಎಂಬದು ಇರತಕ್ಕ ಕರ್ಮಸ್ಥಾನದಲ್ಲಿ ಅದೆ; ಮತ್ತು ಆ ಕರ್ಮಪದವನ್ನು ಮುಂದೆ ಇಟ್ಟಿದೆ. 6) To understand him ಅವನು ಮಾತಾಡುವದನ್ನು, ಬರೆಯುವದನ್ನು ಅಥವಾ ಅವನ ಹೇತುವನ್ನು ತಿಳಿದುಕೊಳ್ಳುವದು. 7) Usual.

ಹೋಗಿದ್ದಾರೆ. ಇನ್ನು ಏನ್ನು ಮಾಡಬೇಕೆಂದು ನಿನ್ನ ಆಲೋಚನೆಯುಂಟು ? ನಾನು ಸಮುದ್ರತೀರದ ಮೇಲೆ[1] ತಿರುಗಾಡಲಿಕ್ಕೆ ಹೋಗಬೇಕೆಂದು ಯೋಚಿಸಿದ್ದೇನೆ. ಮುಂಬಯಿಗೆ ಯಾವಾಗ ಹೋಗಬೇಕೆಂದು ನಿನ್ನ ಆಲೋಚನೆಯುಂಟು? ಈ ವರುಷ ನಿನ್ನ ಪರೀಕ್ಷೆ ಇಳಿಯುವ ಹಾಗೆ ನಿನಗೆ ತೋರುತ್ತದೋ ? ನಿನಗೆ ಹೇಗೆ ಕಾಣುತ್ತದೆ? ನಾನು ಇದನ್ನು ಅವನಿಗೆ ಪದೇ ಪದೇ ಸೂಚಿಸಿದೆನು. ಆದರೆ ಅವನು ಹಾಗೆ ಮಾಡಲಿಕ್ಕೆ ತಪ್ಪಿದನು. ನೀವು ಇಲ್ಲಿಗೆ ಬರಲಿಕ್ಕೆ ಹೇಗೆ ತಪ್ಪಿದಿರಿ? ನಾನು ಹುಡುಗರಿಗೆ ಮಲಗಿಕೊಳ್ಳಲಿಕ್ಕೆ ಹೋಗಿರೆಂದು ಹೇಳಿದೆನು. ನಾನು ಈ ಹೊತ್ತು ರಾತ್ರಿ ಸುಮಾರು ಒಂಬತ್ತೂವರೆ ಗಂಟೆಗೆ ಪುಣೆಗೆ ಮುಟ್ಟುವ ಹಾಗೆ ಕಾಣುತ್ತದೆ. ಜರುಗಿದ ಸಂಗತಿಗಳನ್ನು ನೆನಪು ಮಾಡಿಕೊಳ್ಳಲಿಕ್ಕೆ ಯತ್ನಿಸು. ಆಳಾಗಿ ದುಡಿಯಬೇಕು, ಅರಸಾಗಿ ಉಣ್ಣಬೇಕು[2].

---

## ೪ ನೇ ಪಾಠ.

### The Infinitive Mood (ಮುಂದೆ ಸಾಗಿದ್ದು).

೨೯ ಚತುರ್ಥ್ಯರ್ಥದ ಕ್ರಿಯಾವಾಚಕವು ಯಾವದೊಂದು ನಾಮಪದಕ್ಕೆ ಸಂಬಂಧಿಸಿರಲಾಗಿ, ಅದರ ಭಾಷಾಂತರವು ಒಮ್ಮೊಮ್ಮೆ ಕೃದ್ವಾಚಕ ವಿಶೇಷಣದಂತೆ ಆಗುತ್ತದೆ.

ಉದಾ—He is *the man to do* ಅದನ್ನು ಮಾಡುವ ಮನುಷ್ಯನು ಅವನೇ.
It is *time to go home* ಮನೆಗೆ ಹೋಗುವ ಹೊತ್ತಾಯಿತು.

೩೦ ಕರ್ಮಣಿ ಅನಿಯಮಿತ ಕ್ರಿಯಾವಾಚಕವು ನಾಮಪದಕ್ಕೆ ಸಂಬಂಧಿಸಿರಲು, ಅದನ್ನು ಸಹ ಕೃದ್ವಾಚಕ ವಿಶೇಷಣದಂತೆ ಭಾಷಾಂತರ ಮಾಡಬಹುದು.

ಉದಾ-This is *the lesson to be prepared* ತಯಾರ ಮಾಡತಕ್ಕ ಪಾಠವು ಇದೇ.

೩೧ To be ಎಂಬ ಕ್ರಿಯಾಪದದ ವರ್ತಮಾನ ಇಲ್ಲವೆ ಭೂತಕಾಲದ ರೂಪದ ಮುಂದೆ ಕ್ರಿಯಾವಾಚಕವು ಬಂದರೆ, ಕರ್ತೃವು ಆ ಕ್ರಿಯಾವಾಚಕದಲ್ಲಿದ್ದ ಕ್ರಿಯೆಯನ್ನು ಮಾಡತಕ್ಕದ್ದದೆ ಎಂಬ ಅರ್ಥವಾಗುತ್ತದೆ. ಆದರೆ ಆ ಕ್ರಿಯಾವಾಚಕವು ವಿಧಾನಾರ್ಥದಲ್ಲಿ ಮಾತ್ರ ಇರಕೂಡದು.

---

1) to. 2) Earn with labour and eat with pleasure.

ಉದಾ—

| | |
|---|---|
| I *am to go*[1] | ನನಗೆ ಹೋಗಬೇಕಾಗಿದೆ.<br>ನಾನು ಹೋಗತಕ್ಕದ್ದದೆ, |
| You *are to go*[1] | ನಿನಗೆ ಹೋಗುವದದೆ.<br>ನೀನು ಹೋಗತಕ್ಕದ್ದದೆ. |
| He *is to go*[1] | ಅವನಿಗೆ ಹೋಗುವದದೆ[2],<br>ಅವನು ಹೋಗತಕ್ಕದ್ದದೆ. |
| *Am* I *to go?* | ನಾನು ಹೋಗತಕ್ಕದ್ದುಂಟೋ?<br>ನಾನು ಹೋಗಬೇಕೋ? |
| What *am* I *to tell* him? | ನಾನು ಅವನಿಗೆ ಏನು ಹೇಳಬೇಕು? |
| What *is* he *to do?* | ಅವನು ಏನು ಮಾಡಬೇಕು? |
| He *was* to *go.* | ಅವನು ಹೋಗುವದಿತ್ತು.<br>ಅವನು ಹೋಗುವದು ನಿಶ್ಚಯವಾಗಿತ್ತು. |
| I *am* to *write* a letter. | ನಾನು ಓಲೆ ಬರೆಯುವದದೆ. |
| We *are not to do* so. | ನಾವು ಹೀಗೆ ಮಾಡತಕ್ಕದ್ದಲ್ಲ.<br>ನಾವು ಹೀಗೆ ಮಾಡಬಾರದು |

೩೨ The horse *is to carry* bags of grain ಈ ಕುದುರೆಯು ಕಾಳಿನ ಗೋಣಿಗಳನ್ನು ಹೊರಬೇಕಾಗಿದೆ; ಅಂದರೆ, ಈ ಕುದುರೆಯ ಪಾಲಿಗೆ ಕಾಳಿನ ಗೋಣಿಗಳನು ಹೊರುವದು ಬಂದದೆ.

This is a *horse to carry* bags of grain ಇದು ಕಾಳಿನ ಗೋಣಿಗಳನ್ನು ಹೇರುವ ಕುದುರೆಯು.

☞ ಇವುಗಳಲ್ಲಿ ಮೊದಲನೇ ವಾಕ್ಯದೊಳಗೆ to carry ಎಂಬ ಕ್ರಿಯಾವಾಚಕವು is ಎಂಬ ಕ್ರಿಯಾಪದಕ್ಕೂ, ಎರಡನೇ ವಾಕ್ಯದೊಳಗೆ horse ಎಂಬ ನಾಮಕ್ಕೂ ಸಂಬಂಧಿಸಿ ಅದೆ.

1) ಇದರ ಅರ್ಥವೇನಂದರೆ It is settled that I, you, or he should go.
2) ದ್ವಿತೀಯ ಪುರುಷದಲ್ಲಿಯೂ ತೃತೀಯ ಪುರುಷದಲ್ಲಿಯೂ, ಇಂಗ್ಲಿಷದೊಳಗಿನ ಕ್ರಿಯಾಪದದ ಮೇಲೆ ಜೋರು ಇದ್ದರೆ, ಕರ್ತೃವು ಇಂಥ ಕ್ರಿಯೆಯನ್ನು ಮಾಡುವದು ಅವಶ್ಯವೆಂತ ಮಾತಾಡುವವನ ನಿಶ್ಚಯವುಂಟು ಎಂಬ ಅರ್ಥವಾಗುತ್ತದೆ.—You are (ಅಥವಾ He is) to go=I (the speaker) determine that you or he shall go=ನೀನು ಹೋಗು. ನೀನು (ಅಥವಾ ಅವನು) ಹೋಗಲೇಬೇಕು. ಒಮ್ಮೊಮ್ಮೆ ಬೆದರಿಕೆ ಹಾಕಿದಂತೆ ಅರ್ಥವಾಗುತ್ತದೆ. ಉದಾ—You are (ಅಥವಾ He is) not to go= ನೀನು (ಅವನು) ಹೋಗಕೂಡದು.

### ೩೩ ಶಬ್ದಸಂಗ್ರಹ ೫.

To de-spise' {ತಿರಸ್ಕರಿಸು, ಹೀಯಾಳಿಸು. To re-sist' {ಅಡ್ಡಿ ಮಾಡು, ಅತಂಕಗೊಳಿಸು.

A sup-ply', ಪುರವಣೆ, ಬೇಕಾದಷ್ಟು. E'vil [ನಾಮ] ಅರಿಷ್ಟ, ಕೆಡಕು, ಪಾಪ.

A brook ಹಳ್ಳ, ತೊರೆ. To com-plain' [of] {೧ ಗುಣಗುಟ್ಟು, ೨ ದೂರು. ಫಿರ್ಯಾದಿ ಹೇಳು.

To ob-tain', to pro-cure' {ಸಂಪಾದಿಸು, ದೊರಕಿಸು. Cau-tious ಎರಚ್ಚವುಳ್ಳ, ಜಾಗ್ರತೆಯುಳ್ಳ.

Fate, des'ti-ny {ದೈವ, ಅದೃಷ್ಟ, ಹಣೆಬರಹ. A risk {೧ ಗಂಡಾಂತರ, ಅಪಾಯ; ೨ ಕೇಡಿಗಾಗಲಿ, ಅಪಾಯಕ್ಕಾಗಲಿ ಒಳಗಾಗುವ ಭಯ.

To pi'ty {ದಯೆ ತೋರಿಸು, ಕನಿಕರಪಡು.

To let ಬಾಡಿಗೆಯಿಂದ ಕೊಡು. Tra'vel ಪ್ರವಾಸ, ದೇಶಾಟನ.

ಸೆಲೆ, ಬುಗ್ಗೆ a spring. Self'ish ಸ್ವಾರ್ಥಿ, ಸ್ವಾರ್ಥನಿಷ್ಠ,

ಕುದುರೆಯ ಚಾಕರ—ಮನುಷ್ಯ } a groom. ಪ್ರಜೆಗಳು the sub'jects.

ಯತ್ನಮಾಡು, ಪ್ರಯತ್ನಿಸು to try.

ತಯಾರಿಸು, ಹುಟ್ಟಿಸು, ಉತ್ಪತ್ತಿ ಮಾಡು } to be-get', to pro-duce. ವಿದ್ಯೆ ಕಲಿಸು, ಸುಶಿಕ್ಷಿತ ಮಾಡು } to ed'ucate.

I am not likely to do it ನಾನು ಅದನ್ನು ಮಾಡುವ ಹಾಗೆ ಕಾಣುವದಿಲ್ಲ.

To receive' an an'swer ಉತ್ತರ ದೊರೆ, ಉತ್ತರ ಬರು.

To re-ceive' a guest ಅತಿಥಿಗೆ ಆದರಸತ್ಕಾರ ಮಾಡು.

To in-ter-fere' with {ಎರಡನೇಯವನ ಕೆಲಸದೊಳಗೆ ಕೈ ಹಾಕು, ನಡುವೆ ಬರು, ಗೊಡವೆಗೆ ಹೋಗು.

To run a risk {ಗಂಡಾಂತರಕ್ಕೆ ಒಳಗಾಗು, ಅಪಾಯಕ್ಕೆ ತಲೆ ಕೊಡು, ತನ್ನನ್ನು ಗುರಿ ಮಾಡಿಕೋ.

ಗಂಡಾಂತರಕ್ಕೆ ಅಂಜದೆ ಅದದ್ದಾಗಲಿ ಎಂದು, ಎಂಥ ಸಂಕಟ ಬಂದರೂ } at all risks.

ಮನಸಿನ ಒಲವು turn of mind.

ಸೇರು, ಒಟ್ಟುಗೂಡು, ಜಮಾಯಿಸು to gath'er to geth'er.

ಗುಂಪುಗುಂಪಾಗಿ in crowds.

## ಭಾಷಾಂತರಪಾಠ ೫.

೩೪. To be hated and despised is a great misfortune[1]. These *books are to be bought* at the bookseller's. Whence is our *supply* of grain *to be procured*? There is *much to be said* on this point. *He* is very much *to be pitied*[2]. *To be* good is to be happy[3]. I am not likely *to receive* an answer to my letter. We have *the power to resist* evil. What shall I do *to amuse* you? We have no *reason to complain* of our fate. *Am* I *to wait for* an answer? There are yet many *things to be done*. My horse is *a horse to ride* not *a horse to carry* heavy loads. I have bought a new book for you *to read*. Here are many *houses to let*. It is not good for him *to do so*. What are these workmen *to do* now? There is yet *much* for you *to do*. There is yet *much to be done*, by you. I will do so at all risks. You are not *to interfere* with boys. It is much better *to be cautious* than *to run any* risk. He is not *a boy to do* such a thing as that. He *was to go* yesterday. *To* see men and countries with one's own eyes is better than *to read all* the books of travel in the world. The evil that men do, lives after them.

ನಾನು ಮನೆಗೆ ಹೋಗುವ ಹೊತ್ತಾಯಿತೋ? ನಾನು ನಿಮಗೆ ಬರುವದಕ್ಕೆ ಹೇಳಿದೆನು. ನಾನು ಸೇವಕನಿಗೆ ಅದನ್ನು ಮಾಡಲಿಕ್ಕೆ ಹೇಳಿದ್ದೇನೆ. ವಿದ್ಯಾಭ್ಯಾಸ ಮಾಡುವದು ವಿದ್ಯಾರ್ಥಿಗಳ ಕರ್ತವ್ಯಕರ್ಮವು. (ತಮ್ಮ) ತಂದೆತಾಯಿಗಳ ಮಾತು ಕೇಳುವದು ಚಿಕ್ಕಮಕ್ಕಳ ಧರ್ಮವು. (ತಮ್ಮ) ಮಕ್ಕಳಿಗೆ ವಿದ್ಯೆ ಕಲಿಸುವದು ತಾಯಿತಂದೆಗಳ ಧರ್ಮವು. (ತನ್ನ) ಪ್ರಜೆಗಳ ಪರಿಪಾಲನೆ ಮಾಡುವದು ಅರಸನ ಧರ್ಮವು. (ತನ್ನ) ಗಂಡನನ್ನು ಸಂತೋಷಪಡಿಸುವದು ಹೆಂಡತಿಯ ಧರ್ಮವು. ಆ ಹುಡುಗರು ಮನೆಗೆ ಹೋಗಿದ್ದಾರೆ; ಅವರು ಇನ್ನು ತಿರುಗಿ ಬಾರರು. ನಮ್ಮ ಮನೆಗೆ ಕೆಲವರು ಅತಿಥಿಗಳು ಬರತಕ್ಕವರಿದ್ದರು. ಆದರೆ ಅವರು

---

1) ಜನರು ನಮ್ಮನ್ನು ದ್ವೇಷಿಸುವದೂ ತಿರಸ್ಕರಿಸುವದೂ ನಮ್ಮ ದುರ್ದೈವವೇ. 2) ಅವನು ಕೇವಲ ಕನಿಕರಕ್ಕೆ ಪಾತ್ರನಿದ್ದಾನೆ. 3) ಒಳ್ಳೇ ರೀತಿಯಿಂದ ನಡೆದರೆ ಸೌಖ್ಯವಾಗುತ್ತದೆ.

ಇನ್ನೂ ಬರಲಿಲ್ಲ. ನಾವು ಇಂದು[1] ಬೆಳಿಗ್ಗೆ ಪುಣೆಗೆ ಹೋಗತಕ್ಕವರಿದ್ದೆವು. ಹುಡುಗರು ಆಡಲಿಕ್ಕೆ ಹೋಗಿದ್ದಾರೆ. ಮಿಠಾಯಿ ಕೊಂಡುಕೊಳ್ಳಲಿಕ್ಕೆ ಅವನ ಹತ್ತಿರ ಹಣವಿದ್ದಿಲ್ಲ. ಅವನಿಗೆ ಕುಡಿಯಲಿಕ್ಕೆ ನೀರು ಸಿಗಲಿಲ್ಲ. ನನಗೆ ಕುಡಿಯಲಿಕ್ಕೆ ಸ್ವಲ್ಪ[2] ನೀರು ಬೇಕು. ನೀರು ಕುಡಿಯುವದಕ್ಕಾಗಿ ಒಂದು ಕುರಿಮರಿಯು ಒಂದು ಹಳ್ಳಕ್ಕೆ ಹೋಯಿತು. ಕುದುರೆಯ ಮನುಷ್ಯನು ಕುದುರೆಗಳನ್ನು ನೀರು ಕುಡಿಸುವದಕ್ಕಾಗಿ ಕೆರೆಗೆ ಒಯ್ದನು[3]. ನಾನು ಅವನಿಗೆ ತಿನ್ನಲಿಕ್ಕೆ ಸ್ವಲ್ಪ ರೊಟ್ಟಿಯನ್ನೂ, ಕುಡಿಯಲಿಕ್ಕೆ ನೀರನ್ನೂ ಕೊಟ್ಟೆನು. ಎರಡನೆಯವರ ಮೇಲೆ ಪ್ರೀತಿ ಮಾಡುವದು ತಮಗೆ ಸೇರದಿದ್ದರೆ[4], ತಮ್ಮ ಮೇಲೆ ಪ್ರೀತಿ ಮಾಡುವದು ಎರಡನೆಯವರಿಗೆ ಸೇರದು. ಪ್ರೀತಿಯಿಂದ ಪ್ರೀತಿಯು ಹುಟ್ಟುತ್ತದೆ[5]. ನನಗೆ ಮುಂಬಯಿ ಪಟ್ಟಣವನ್ನು ನೋಡಬೇಕೆಂಬ ಅಭಿಲಾಷೆಯು (ಇಚ್ಛೆ) ಬಹಳ[6] ಉಂಟು. ರಾಜಪುತ್ರನನ್ನು ನೋಡುವದಕ್ಕಾಗಿ ಜನರು ಗುಂಪುಗುಂಪಾಗಿ ನೆರೆದಿದ್ದಾರೆ.

### ೩೫ ಶಬ್ದಸಂಗ್ರಹ ೬.

| | | | |
|---|---|---|---|
| Pleas'ant | ಚಲೋ, ಆನಂದಕರವಾದ, ರಮ್ಯ, ಸರಸ. | Good | ಕಲ್ಯಾಣ, ಹಿತ. |
| Con-sum-ma'-tion | ಸಂಪೂರ್ಣತೆ,ಸಿದ್ಧಿ, ಪರಿಣಾಮ. | Goods | ಸರಕುಗಳು, ಸಾಮಾನು. |
| De-vout'ly | ಮನಃಪೂರ್ವಕವಾಗಿ, ಭಕ್ತಿಪೂರ್ವಕವಾಗಿ. | Auc'tion | ಲಿಲಾವು. |
| Solo | ಒಂದೇ, ಕೇವಲ. | Hos pi-tal'i'ty | ಆತಿಥ್ಯ,ಆದರಸತ್ಕಾರ. |
| Oc-cu pa'tion | ಉದ್ಯೋಗ, ಕೆಲಸ. | A ble', sing | ೧ ಅನುಗ್ರಹ, ಫಲ, ಭಗವತ್ ಕೃಪೆ, ೨ ಆಶೀರ್ವಾದ. |
| Dis-grace'ful | ನಾಚಿಕೆಗೇಡಿತನ, ಅವಮಾನಕರ. | By and by, pre'sent-ly | ಒಂದೇಕ್ಷಣದಲ್ಲಿ,ಈಗಲೇ, ಸ್ವಲ್ಪ ಹೊತ್ತಿನಲ್ಲಿ. |
| | | A pond | ಕೆರೆ. |
| A por'tion | ಪಾಲು, ಅಂಶ, ಭಾಗ. | ಪ್ರಯತ್ನ | an effort. |
| ಕಂಬಳಿ | a blank'et | ನಿರಾಶೆ | dis-ap-point'ment. |
| ಆಶೆ | hope. | ಪರಿಣಾಮ | an ef-fect, a re-sult, a con'se-quence. |
| ಶ್ರಮ | la'bour,toil. | | |

1) This. 2) Some. 3) Took. 4) If. 5) Love begets love. 6) (A) strong.

| | |
|---|---|
| To get out of | ದಾಟಿ ಹೋಗು, ಪಾರಾಗು |
| As much as pos'si-ble | ಶಕ್ಯ ಆದಷ್ಟು, ಕೈಲಾದಮಟ್ಟಿಗೆ. |
| To call upon a man | ಒಬ್ಬನ ಭೆಟ್ಟಿ ತಕ್ಕೊಳ್ಳು. |
| ಹೊದ್ದುಕೊಳ್ಳು | to co'ver one's self with. |
| ಅದಕ್ಕೆ ಬಹಳ ಶ್ರಮ ಬೀಳುತ್ತದೆ | it re-quires' much ( ಅಥವಾ a great deal of ) trouble. |
| ಬೇನೆ ಬೀಳು | to fall sick, to fall ill. |
| ದಿನದಿನಕ್ಕೆ | day by day. |
| ಒಳಗಾಗು, ಅಧೀನವಾಗು, ಸಿಕ್ಕಿಬೀಳು | to suc'cumb' to, to fall into the hands of. |
| ಆಶೆ ಬಿಡು, ಹತಾಶನಾಗು | to give up all hope. |
| ನಿರಾಶೆಯಾಗು, ಎದೆಗುಂದು | to fall into despair', to despair'(of) |
| ಕೈಗೂಡಿ ಬರು, ಸಿದ್ಧಿ ಹೊಂದು, ಉತ್ತರಾಧಿಕಾರಿಯಾಗಿರು | to suc-ceed' (in). |
| ಸ್ನೇಹ ಸಂಪಾದಿಸು | to gain (ಅಥವಾ to sec'ure) the friend'ship (of). |
| ನನ್ನ ಸಲುವಾಗಿ, ನನಗೋಸ್ಕರ | on my ac-count, for my sake. |
| ದಾವತಿಪಡು, ಶ್ರಮ ತಕ್ಕೊಳ್ಳು | to take trouble, to put one's self to troub'le. |
| ಬಹಳ ಪ್ರಯಾಸಪಡು, ಕಷ್ಟವಹಿಸು | to take great pains. |
| ಸುಮ್ಮನೆ, ವ್ಯರ್ಥವಾಗಿ, ನಿರರ್ಥಕವಾಗಿ | in vain, for nothing. |

## ಭಾಷಾಂತರಪಾಠ ೬.

೩೬. What a pleasant thing it was *to see* him again in good health ? This *consummation* is devoutly *to be wished*[1]. His sole occupation is *to laugh* at the mistakes of others. It is not good for a boy like you *to behave* in such disgraceful manner. *The goods were to be sold* by auction. Is there anything for me *to do* ? His business is *to teach* those boys in the morning. *To do good to* others is the duty of every virtuous person. There is no way *to get out of* the difficulty. He received his guests with great hospitality. It is *time* for you *to go* to school. There is[2] *a time to read* and a time to

1) ಇದು ಭಕ್ತಿಪೂರ್ವಕವಾಗಿ ( ಅಥವಾ ಅಂತಃಕರಣಪೂರ್ವಕವಾಗಿ ) ಇಚ್ಛಿಸತಕ್ಕ ಪರಿಣಾಮವು. 2) ಬೇಕೆ.

*play*. *To be loved* and *esteemed* is a blessing. Where is this *book to be had*[1]? His object was to *assist* you as much as possible[2]. This pain is very hard *to bear*. We *are to call upon* him at his house to-morrow. What *are* we *to say* to this? *Am I to obey* a boy younger than myself? You *are* not *to conceal* any portion of the truth from your parents. You *are to confess* everything to them. *Am I to go* to the doctor now or by and by? You *are to go to* him at once and tell him that *etc*.

ಒಬ್ಬ ಒಕ್ಕಲಿಗನ ಬಳಿಯಲ್ಲಿ ಬಹಳ[3] ಕಾಳು ಉಂಟು. ಆದರೆ ಅವನಿಗೆ ಹೊದ್ದುಕೊಳ್ಳಲಿಕ್ಕೆ ಕಂಬಳಿ ಇಲ್ಲ. ಅದು ಅವನಿಗೆ ಹೇಗೆ ದೊರೆಯಬೇಕು? ನಿನಗೆ ಕೊಡಲಿಕ್ಕೆ ನನ್ನ ಹತ್ತರ ದುಡ್ಡು ಇಲ್ಲ. ನಮಗೆ ಬೇಕಾದದ್ದನ್ನು ದೊರಕಿಸಲಿಕ್ಕೆ ಬಹಳ ಶ್ರಮ ಬೀಳುತ್ತದೆ. ಇಂಥ ಸೋಮಾರಿಗೆ ಹೊಟ್ಟೆ ತುಂಬ[4] ಅನ್ನ ಸಿಗುವದು ಬಹಳ ಕಠಿಣವದೆ ಎಂದು ಕಂಡುಬರುವದು. ಕೈಕೊಳ್ಳತಕ್ಕ ಕೆಲಸವು ಇದು ನಾನು ಈ ಕೆಲಸವನ್ನು ಕೈಕೊಳ್ಳತಕ್ಕದ್ದದೆ. ನಾನು ಇಂಥ ಕೆಲಸವನ್ನು ಎಂದಿಗೂ ಕೈಕೊಳ್ಳಲಿಕ್ಕಿಲ್ಲ. ತೋಟದೊಳಗೆ ಹೋಗುವ[5] ದಾರಿ ಯಾವದು? ತೋಟಕ್ಕೆ[6] ಹೋಗುವ ದಾರಿ ಯಾವದು? ಅವನು ಬೇನೆ ಬಿದ್ದನು; ಅವನಿಗೆ ಸಹಾಯ ಮಾಡಲಿಕ್ಕೆ ಒಬ್ಬ ಸ್ನೇಹಿತನೂ ಇಲ್ಲದ ಮೇಲೆ ಅವನು ಏನು ಮಾಡಬೇಕು? ಆ ಬಡ ಪ್ರಾಣಿಯು ದಿನದಿನಕ್ಕೆ[7] ಹೆಚ್ಚೆಚ್ಚು ಅಶಕ್ತನಾಗಿ ಕಡೆಗೆ ಮರಣಕ್ಕೊಳಗಾದನು. ಅವನಿಗೆ ಆಶೆ ಇದ್ದಿಲ್ಲ. ಅವನು ಆಶೆ ಬಿಟ್ಟನು. ಅವನು ನಿರಾಶೆಯುಳ್ಳವನಾದನು. ನಿರಾಶೆಯುಳ್ಳವನಾಗಬೇಡ. ಪುನಃ ಯತ್ನ ಮಾಡು. ಅವನು ಬಹಳ ಪ್ರಯತ್ನ ಮಾಡಿದನು[8]. ಆದರೆ ಅವನ ಇಚ್ಛೆ ಕೈಗೂಡಿ ಬರಲಿಲ್ಲ[9]. ರಾಮನ ಸ್ನೇಹ ಸಂಪಾದಿಸುವದಕ್ಕಾಗಿ ಅವನು ಬಹಳ ಪ್ರಯತ್ನ ಮಾಡಿದನು; ಆದರೆ ಅವನ ಪ್ರಯತ್ನಗಳೆಲ್ಲ ವ್ಯರ್ಥವಾಗಿ ಒಂದು ಹೋಗಿ ಒಂದಾಯಿತು[10]. ನೀನು ನನ್ನ ಸಲುವಾಗಿ ಏನೂ ಶ್ರಮಪಡಬೇಡ. ಇಂಗ್ಲಿಷ ಭಾಷೆಯನ್ನು ಕಲಿಯಲಿಕ್ಕೆ ಅವನು ಬಹಳ ಕಷ್ಟಪಟ್ಟನು. ಅದರ ವಿಷಯಕ್ಕೆ ನಾನು ಬಹಳ ಶ್ರಮಪಟ್ಟೆನು. ತಾವು ಸುಮ್ಮನೆ ಶ್ರಮಪಡಬೇಡಿರಿ[11].

---

1) ಮಾರಲಿಕ್ಕೆ ಸಿಗುತ್ತದೆ. 2) ಆದಷ್ಟು. 3) Plenty of corn, abundant corn. 4) Enough. 5) Into. 6) To. 7) Day by day. 8) Tried much. 9) He did not succeed in his object. 10) All his efforts had a very different effect. 11) Do not trouble yourself for nothing.

# ೫ ನೆಯ ಪಾಠ.

## The Infinitive Mood ( ಮುಂದೆ ಸಾಗಿದ್ದು ).

೩೭ To have ಎಂಬ ಕ್ರಿಯಾಪದದ ಮುಂದೆ ಕಿ ಯಾವಾಚಕವು ಬಂದ
ಕರ್ತೃವು ಆ ಕ್ರಿಯಾವಾಚಕದಲ್ಲಿದ್ದ ಕ್ರಿಯೆಯನ್ನು ಮಾಡಬೇಕಾಗಿದೆ ಎಂ
ಅರ್ಥವಾಗುತ್ತದೆ. To have ಎಂಬ ಕ್ರಿಯಾಪದದಿಂದ ಮುಂದಿನ ಕ್ರಿಯೆ
ಅವಶ್ಯಕತೆಯನ್ನು ಎಷ್ಟು ತೋರಿಸಲಾಗುವದೋ ಅಷ್ಟು to be ಎಂಬದರಿಂ
ತೋರಿಸಲಾಗದು.

| | |
|---|---|
| I *have to go*[1] | ನಾನು ಹೋಗಬೇಕಾಗಿದೆ, ನಾನು ಹೋಗುವದು ಅವಶ್ಯವದೆ. |
| You *have to go* | ನೀನು ಹೋಗಬೇಕಾಗಿದೆ[2] ನೀನು ಹೋಗುವದು ಅವಶ್ಯವಿದೆ. |
| He *has to go* | ಆತನು ಹೋಗಬೇಕಾಗಿದೆ, ಆತನು ಹೋಗುವದು ಅವಶ್ಯವದೆ. |

೩೮ Had[3] ದ ಮುಂದೆ 'better' ( ಹೆಚ್ಚು ಒಳ್ಳೆ ) ಎಂಬ ಶಬ್ದ
ವಿರಲಾಗಿ ಮುಂದಿನ ಕ್ರಿಯಾವಾಚಕದ to ಲೋಪವಾಗುತ್ತದೆ. ಉದಾ—

| | |
|---|---|
| I had better *do so* | ನಾನು ಹೀಗೆ ಮಾಡುವದು ಲೇಸು. |
| You had better *do so* | ನೀನು ,, ,, ,,[4] |
| He had better *do so* | ಅವನು ,, ,, ,, |

1) ಇದರ ಅರ್ಥವೇನಂದರೆ, I am obliged to go. I must go
circumstances or the will of another than the speaker's, make
it necessary for me (you or him) to go ಮಾತಾಡುವವನನ್ನು ಬಿಟ್ಟು
ಮತ್ತೆ ಯಾವನಾದರೊಬ್ಬನ ಇಚ್ಛೆಯಿಂದಾಗಲಿ, ಏನಾದರೂ ಕಾರಣದಿಂದಾಗಲಿ ನಾನು
( ನೀನು ಅಥವಾ ಅವನು ) ಹೋಗುವದು ಅವಶ್ಯವದೆ. 2) ಇಲ್ಲಿ ಚನ್ನಾಗಿ ನೆನ
ನಲ್ಲಿಡತಕ್ಕದ್ದೇನಂದರೆ, ಮಾತಾಡುವವನು ತನ್ನ ಸ್ವಂತ ಇಚ್ಛೆಯನ್ನಾಗಲಿ ಅಪ್ಪ
ಯನ್ನಾಗಲಿ ಬೆದರಿಕೆಯನ್ನಾಗಲಿ ತೋರಿಸುವದಿಲ್ಲ. 3) ಇಲ್ಲಿ had ಎಂಬದು ಸಂಕೇ
ರೂಪ ( Subjunctive Mood ) ದಲ್ಲಿ ಪ್ರಯೋಗಿಸಿದ್ದು, ಅದರ ಅರ್ಥವು would
have ಎಂತ ಆಗುತ್ತದೆ. *(Better)*. 4) Had better ಎಂಬದರಿಂದ ದ್ವಿತೀ
ಪುರುಷದಲ್ಲಿ ವಿಧ್ಯರ್ಥದಂತೆ ಅರ್ಥವಾಗುತ್ತದೆ. ಹೇಗೆಂದರೆ—You had better shut
the door ನೀನು ಬಾಗಿಲ ಇಕ್ಕುವದು ಒಳ್ಳೇದು, ಅಂದರೆ ಬಾಗಿಲ ಇಕ್ಕು. ಮಾತಾಡು
ರೀತಿಯ ಮೇಲಿಂದ ... ಬೆದರಿಕೆ ... ಸಹ ಅರ್ಥವಾಗುತ್ತದೆ.

೩೯ Had rather ಇದರ ಮುಂದೆ ಸಹ ಕ್ರಿಯಾವಾಚಕದ to ಲೋಪವಾಗುತ್ತದೆ. ಉದಾ—

I had rather *go* than *stay* ನಾನು ಇರುವದಕ್ಕಿಂತ ಹೋಗುವದೇಲೇಸು.

೪೦ To have ಎಂಬ ಧಾತುವಿನ ರೂಪಗಳ ಮುಂದೆ ಕ್ರಿಯಾವಾಚಕಗಳು ಬಂದರೆ ಮೇಲಿನ ನಿಯಮದಂತೆ ಅರ್ಥ ಮಾಡಬೇಕು. ಒಮ್ಮೊಮ್ಮೆ ಆ ಧಾತುವಿನ ಮುಂದೆ ನಾಮಗಳು ಬಂದರೆ ಅದರ ಅರ್ಥವನ್ನು ಸಾದಾ to have ಎಂಬ ಧಾತುವಿನ ಅರ್ಥದಂತೆ ಮಾಡಬೇಕು. ಉದಾ—

1) He has to give much money to the poor ಅವನು ಬಹಳ ಹಣ ಬಡಬಗ್ಗರಿಗೆ ಕೊಡಬೇಕಾಗಿದೆ.

2) He has much money to give the poor ಬಡಬಗ್ಗರಿಗೆ ಕೊಡಬಹುದಾದ ಹಣ ಅವನಲ್ಲಿ ಬಹಳ ಉಂಟು,

## ೪೧ ಶಬ್ದಸಂಗ್ರಹ ೭.

| | | | |
|---|---|---|---|
| To med'dle | ನಡುವೆ ಬರು, ಕೈಹಾಕು, ಗೊಡವೆಗೆ ಹೋಗು, | A pre'ci-pice | ಕಡೆದಾದ ಸ್ಥಳ ನೀಟಾಗಿರುವ ಬಂಡೆಯ ಪಾರ್ಶ್ವ. |
| An af-fair' | ಕೆಲಸ. | An ar-range'-ment | ವ್ಯವಸ್ಥೆ ಏರ್ಪಾಡು. |
| Un-punc'tual | ತಕ್ಕ ಸಮಯಕ್ಕೆ ಬಾರದ, ಅನಿಯಮಿತ, | An a'gent | ಮುತಾಲಿಕ, ಗುಮಾಸ್ತ, ಕಾರಭಾರಿ |
| Sale | ವಿಕ್ರಯ ಮಾರಾಟ | A pur'chase | ಕೊಂಡುಕೊಳ್ಳೋಣ, ಕೊಂಡ ವಸ್ತು, |
| ಆಭರಣ, ಒಡವೆ; ಭೂಷಣ | an or'na-ment | ವಿವರ, ಕಥೆ ವೃತ್ತಾಂತ ಹೇಳಿಕೆ | a story, an ac'count'. a state'ment' |
| ಕಡಿಮೆ ಕಿಮ್ಮತ್ತಿನ ಆಭರಣ | a trink'et | ಗೌರವ, ಮಹತ್ವ | import'ance, |
| ಉದ್ದ, ಬೇಸರಗೊಳಿಸುವ | length'y, | ದೊಡ್ಡ,ಮಹತ್ವವುಳ್ಳ, ವಿಶೇಷವಾದ | im-portant, of im-port'ance |
| ನೆರವೇರಿಸು, ಸಾಧಿಸು | to ac-com'plish. | ಕಮಾನು | an arch |

To work hard ಬಹಳ ದುಡಿ, ಪರಿಶ್ರಮಮಾಡು

To file a suit ದಾವೆ ತರು, ಫಿರ್ಯಾದಿ ಮಾಡು,

To sign one's name ಸಹಿ ಮಾಡು, ರುಜು ಹಾಕು,

ಹೊಟ್ಟೆ ತುಂಬಿಕೊಳ್ಳು, ಚರಿತಾರ್ಥ ಸಾಗಿಸು { to earn (one's) live'lihood, to main-tain' (one's self).

ಓಡಿಹೋಗು, ಪಾರಾಗು, ಬಿಡುಗಡೆಹೊಂದು, { to run a-way to es-cape'.

| | |
|---|---|
| ಇತ್ತಿತ್ತ, ಈಗ | now-a days, lately. |
| ಜಾತಿಭೇದ | the caste-sy'stem, the di-vi-sion into castes. |
| ಅವನ ಪಕ್ಷದಿಂದ, ಅವನ ಪರವಾಗಿ | in his fa'vour, in his be half. |
| ಮತ್ತೆ ಯಾವಾಗಾದರೂ | at some oth'er time. |
| ಕಷ್ಟ ಅನುಭವಿಸು, ತೊಂದರೆಪಡು | to suf'fer a hard'ship. |
| ಅಡಚಣಿ ಬಂದು ಒದಗು | to meet with a dif'ficul-ty, |
| ಅಡಚಣಿ ತಾಳಿಕೋ<br>ಅಡಚಣಿ ಸಹಿಸು | to put up with a dif'ficul-ty, an in-con-ve'ni-ence. |

## ಭಾಷಾಂತರಪಾಠ ೭.

೪೨. *Have* you any hats *to sell*? *Have* you any rooms *to let*? I *have to work* hard for my bread[1]. There are many houses for sale in the market. I had much rather *stay* at home than *accompany* you. In my opinion you had better not *meddle* with that affair. He *has to bring* water from a distance[2]. The careless boy was often[3] unpunctual. and I *had to punish* him for it. He *had* several things *to do*. He *had to do* several things. I *have to say* much on the subject. What *have you to say* about this matter? We *had to cross* several bridges. I *shall have* to *file* a suit against him[4]. I *had to do* the same thing some years ago. You *will have to go* to school to-morrow early in the morning. You had better *be* quiet and *make* no noise. We *had* better *do* so at once. I *had to make* some arrangements with my agents. You *will have to ascend* the precipice at all risks. I have no money *to buy* that book. The noise in the street was very great and I *had to shut* all the windows for some time. I *have to make* several purchases in the market. You had better *speak* the truth. I have nothing *to do*. I *have to do* nothing. You omitted *to sign* your name.

1) ಹೊಟ್ಟೆಗಾಗಿ. 2) ದೂರದಿಂದ. 3) ಎಷ್ಟೋ ಸಾರೆ, 4) ಅವನ ಮೇಲೆ.

ನಾನು ನಿನಗೆ ಒಂದು ಮಾತು ಕೇಳಬೇಕಾಗಿದೆ. ಆ ಮೇಲೆ ನೀವು ಏನು ಮಾಡತಕ್ಕದ್ದಿತ್ತು? ಹೊಟ್ಟೆ ತುಂಬಿಕೊಳ್ಳುವದಕ್ಕಾಗಿ ನಾವು ಹೀಗೆ ಮಾಡಬೇಕಾಗುತ್ತದೆ. ಹುಡುಗರು ತಮ್ಮ ಪಾಠಗಳನ್ನು ತಯಾರು ಮಾಡತಕ್ಕದ್ದಿತ್ತು. ನಾನು ಇನ್ನೂ ಬೇರೆ ಅನೇಕ ಕೆಲಸಗಳನ್ನು[1] ಮಾಡಬೇಕಾಗಿದೆ. ನಿಮ್ಮಲ್ಲಿ ಮಾರುವ[2] ಕುದುರೆಗಳೇನಾದರೂ ಉಂಟೋ? ನಾನು ನನ್ನ ಕುದುರೆಯನ್ನು ಮಾರಬೇಕಾಗಿದೆ. ನನಗೆ ಈ ಅಂಗಡಿಯಲ್ಲಿ[3] ಇನ್ನೂ ಎಷ್ಟೋ ಜಿನಸು ಕೊಳ್ಳತಕ್ಕದ್ದಿತ್ತು. ಆದರೆ ಅದಕ್ಕೆ ನನಗೆ ಹೊತ್ತು ಇದ್ದಿಲ್ಲ. ನಾನು ನಾಳೆ ಪುನಃ ಅಲ್ಲಿಗೆ ಹೋಗಬೇಕಾಗುವದು. ಇಂಥ ನಿಷ್ಠುರ ಮನುಷ್ಯನ ಕೂಡ ನೀನು ಏನು ಮಾಡತಕ್ಕದ್ದದೆ? ಈ ಆಭರಣಗಳನ್ನು ತಿರುಗಿ ಕೊಡಲಿಕ್ಕೆ ನಾನು ನಾಳೆ ನನ್ನ ಸ್ನೇಹಿತನ ಮನೆಗೆ ಹೋಗಬೇಕಾಗಿದೆ. ಕೈದಿಯ ಉದ್ದೇಶವು ಓಡಿಹೋಗತಕ್ಕದ್ದಿತ್ತು. ಎಷ್ಟೋ ಜನ ಕೂಲಿಕಾರರು ದಿನಾಲು ಹತ್ತು ಗಂಟೆಗೆ ಕಚೇರಿಗೆ ಹೋಗಬೇಕಾಗಿದೆ.

ನನ್ನಲ್ಲಿ[4] ದುಡ್ಡು ಇಲ್ಲ. ನಾನು ಒಬ್ಬ[5] ಮನುಷ್ಯನನ್ನು ಕರೆಯಬೇಕಾಗಿದೆ. ಕಡಾ ಕೊಡಲಿಕ್ಕೆ ನಿನ್ನಲ್ಲಿ ಏನಾದರು[6] ಹಣವುಂಟೋ? ನಾನೇ ಒಬ್ಬ ಸ್ನೇಹಿತನ ಹತ್ತರ ಸ್ವಲ್ಪ[7] ಹಣ ಕಡಾ ತರಬೇಕಾಗಿದೆ. ನೀವು ಮುಂದಿನ ತಿಂಗಳಲ್ಲಿ[8] ಪುಣೆಗೆ ಹೋಗತಕ್ಕದ್ದುಂಟೋ? ನೀನು ಇತ್ತಿತ್ತ ಸಾಯಂಕಾಲಕ್ಕೆ ನದೀ ದಂಡಿಯ ಮೇಲೆ ತಿರುಗಾಡಲಿಕ್ಕೆ ಯಾಕೆ ಹೋಗುವದಿಲ್ಲ? ಆ ವೇಳೆಯಲ್ಲಿ ನಾನು ನಮ್ಮ ಅತಿಥಿಯ ಸಂಗಡ ಒಬ್ಬ ಗೃಹಸ್ಥನ ಮನೆಗೆ ಹೋಗಬೇಕಾಗುತ್ತದೆ. ಅವನ ಪಕ್ಷದಿಂದ ನೀನು ಏನು ಹೇಳತಕ್ಕದ್ದದೆ? ನಿನಗೆ ಯಾರ ಶಿಫಾರಸು ಮಾಡತಕ್ಕದ್ದದೆ? ನೀನು ನನಗೆ ಏನು ಹೇಳತಕ್ಕದ್ದದೆ? ಇಷ್ಟು ಉದ್ದ ವೃತ್ತಾಂತವನ್ನು ಕೇಳುವದಕ್ಕೆ[9] ಈಗ ನನಗೆ ಹೊತ್ತು ಇಲ್ಲ; ಅದನ್ನು ನನಗೆ ಮತ್ತೆ ಯಾವಾಗಾದರೂ ಹೇಳು. ಜಾತಿಭೇದದಿಂದ ಕೆಲವು ಹಿಂದೂ ಜನರು ಬಹಳ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. ಇಂಥ ಸಂಕಟಗಳನ್ನು ನೀವು ಯಾಕೆ ಸಹಿಸುತ್ತೀರಿ? ಇಂಥ ಮಹತ್ವವುಳ್ಳ ಹೇತುವನ್ನು (ಉದ್ದಿಷ್ಟವನ್ನು) ಸಾಧಿಸಬೇಕಾದರೆ ನಮಗೆ ಬಹಳ ಅಡಚಣಿಗಳು ಬಂದು ಒದಗುವವು.

---

1) Many other things. 2) To sell for sale 3) At 4) With me. 5) ಒಬ್ಬ a certain; ಮನುಷ್ಯ a man. a person, an individual. 6) Any. 7) Some. 8) Next month. 9) To listen to. 10) We have to accomplish such an important object, ಅಥವಾ an object of such importance.

## ೬ ನೇ ಪಾಠ.

## ವರ್ತಮಾನಭವಿಷ್ಯತ್, ಭೂತಭವಿಷ್ಯತ್, ಭವಿಷ್ಯಭವಿಷ್ಯತ್ಕಾಲಗಳು.

## Present Intentional, Past Intentional and Future Intentional Tenses.

೪೩. To be ಎಂಬ ಕ್ರಿಯಾಪದದ ವರ್ತಮಾನ, ಭೂತ, ಭವಿಷ್ಯತ್ಕಾಲಗಳ ಮುಂದೆ going ಎಂಬ ಶಬ್ದವನ್ನು ಹಾಕಿ ಅದರ ಮುಂದೆ ಕ್ರಿಯಾವಾಚಕವನ್ನಿಟ್ಟರೆ, ಆ ಕ್ರಿಯಾವಾಚಕವು ಯಾವ ಕ್ರಿಯೆಯನ್ನು ಹೇಳುವದೋ ಆ ಕ್ರಿಯೆಯ ವರ್ತಮಾನಭವಿಷ್ಯತ್, ಭೂತಭವಿಷ್ಯತ್, ಭವಿಷ್ಯಭವಿಷ್ಯತ್ಕಾಲಗಳು ಅನುಕ್ರಮವಾಗಿ ಸಿದ್ಧವಾಗುತ್ತವೆ.

### ವರ್ತಮಾನಭವಿಷ್ಯತ್ತು Present Intentional.

*Singular.*

| | |
|---|---|
| *1st per.* I am going to write[1] | ನಾನು ಬರೆಯುವವನಿದ್ದೇನೆ.<br>ನಾನು ಬರೆಯತಕ್ಕವನಿದ್ದೇನೆ. |
| *2nd per.* Thou art going to write | ನೀನು ಬರೆಯುವವನಿದ್ದೀ.<br>ನೀನು ಬರೆಯತಕ್ಕವನಿದ್ದೀ. |
| *3rd per.* He is going to write | ಅವನು ಬರೆಯುವವನಿದ್ದಾನೆ.<br>ಅವನು ಬರೆಯತಕ್ಕವನಿದ್ದಾನೆ. |

1) ಈ ವಾಕ್ಯದ ಶಬ್ದಶಃ ಭಾಷಾಂತರವು ನಾನು ಬರೆಯಲಿಕ್ಕೆ ಹೋಗುತ್ತಿದ್ದೇನೆ ಎಂತ ಆಗುತ್ತದೆ; ಆದರೆ ವರ್ತಮಾನ ಭವಿಷ್ಯತ್ಕಾಲದ ಸಂಬಂಧವಿರುವದರಿಂದ ಇಲ್ಲಿ going ಎಂಬ ಶಬ್ದದ ರೂಢಿಯ ಅರ್ಥವಾಗುವದಿಲ್ಲ; ಅದು ಕೇವಲ ಸಹಾಯ ಕ್ರಿಯಾಪದವೆಂದು ತಿಳಿದುಕೊಳ್ಳಬೇಕು. ಅದರಿಂದ ಕರ್ತೃವು ಇಂಥ ಕ್ರಿಯೆಯನ್ನು ಮಾಡುವವನಿದ್ದಾನೆ. ಎಂಬ ಅರ್ಥ ಹೊರಡುತ್ತದೆ. ಇಲ್ಲವೆ going to write (ಬರೆಯುವವ) ಎಂಬದು ಸಂಯುಕ್ತ ವಿಶೇಷಣವೆಂದೆನಿಸಿ, ಅದು I ಎಂಬ ಕರ್ತೃವಿಗೆ ಸಂಬಂಧಿಸಿರುತ್ತದೆಂತಲೂ am ಎಂಬದೇ ಕ್ರಿಯಾಪದವೆಂತಲೂ ತಿಳಿಯಬೇಕು. 'ನಾನು ಬರೆಯಲಿಕ್ಕೆ ಹೋಗುತ್ತಾ ಇದ್ದೇನೆ' ಎಂತ ಅನ್ನುವದಾದರೆ Infinitive ದ ಹಿಂದೆ ಸ್ಥಳವಾಚಕ ಕ್ರಿಯಾವಿಶೇಷಣವನ್ನಾಗಲಿ ಹಾಕುವ ಪರಿಪಾಠವುಂಟು. I am going there to write.

## Present Intentional, Past Intentional, and Future Intentional Tenses.

*Plural.*

*1st per.* We are going to write { ನಾವು ಬರೆಯುವವರಿದ್ದೇವೆ. / ನಾವು ಬರೆಯತಕ್ಕವರಿದ್ದೇವೆ.

*2nd per.* You are going to write { ನೀವು ಬರೆಯುವವರಿದ್ದೀರಿ. / ನೀವು ಬರೆಯತಕ್ಕವರಿದ್ದೀರಿ.

*3rd per.* They are going to write { ಅವರು ಬರೆಯುವವರಿದ್ದಾರೆ. / ಅವರು ಬರೆಯತಕ್ಕವರಿದ್ದಾರೆ.

### ಭೂತಭವಿಷ್ಯತ್ತು Past Intentional.

| | *Singular.* | *Plural.* |
|---|---|---|
| *1st per.* | I was going to write[1] | We were going to write. |
| *2nd per.* | Thou wast going to write | You were going to write. |
| *3rd per.* | He was going to write | They were going to write. |

### ಭವಿಷ್ಯಭವಿಷ್ಯತ್ತು Future Intentional.

| | *Singular.* | *Plural.* |
|---|---|---|
| *1st per.* | I shall be going to write[2]. | We shall be going to write. |
| *2nd per.* | You will be going to write. | You will be going to write |
| *3rd per.* | He will be going to write. | They will be going te write |

೪೪ Going ಎಂಬದಕ್ಕೆ ಬದಲಾಗಿ about ಎಂಬ ಶಬ್ದವನ್ನು ಹಾಕಿದರೂ ಇವೇ ಕಾಲಗಳು ಸಿದ್ಧವಾಗುತ್ತವೆ. ಅರ್ಥವಾದರೂ ಬಹುತರವಾಗಿ ಇದೇ ಆಗುತ್ತದೆಂದರೂ ಅಡ್ಡಿಯಿಲ್ಲ; ಆದರೆ about ಎಂಬ ಶಬ್ದದಿಂದ 'ಕರ್ತೃವಿನ ಮನಸ್ಸಿನಲ್ಲಿ ಕ್ರಿಯೆಯನ್ನು ಕೂಡಲೇ ಮಾಡತಕ್ಕದ್ದುಂಟು.' ಎಂಬ ಅರ್ಥ ಹೊರಟ ಹಾಗೆ going ಎಂಬ ಶಬ್ದದಿಂದ ಹೊರಡುವದಿಲ್ಲ.

He *was about to go*[3] ಅವನು ಹೋಗುವ ಆಲೋಚನೆಯಲ್ಲಿದ್ದನು.

---

1) ನಾನು ಬರೆಯುವವನಿದ್ದೆನು. 2) ನಾನು ಬರೆಯುವವನಿರುವೆನು. ಅಥವಾ ಬರೆಯತಕ್ಕವನಿರುವೆನು. ( ಈ ಕಾಲವನ್ನು ಇಂಗ್ಲಿಷದಲ್ಲಿ ಉಪಯೋಗಿಸುವದು ಬಹಳ ಅಪರೂಪ ) 3) He was just about to go, He was just on the point of going ಅವನು ಹೊರಟು ನಿಂತಿದ್ದನು.

## *Present Intentional, Past Intentional, and Future Intentional Tenses.*

೪೫ ಇಂಗ್ಲಿಷ ಭಾಷೆಯೊಳಗೆ ಕರ್ಮಣಿ ಪ್ರಯೋಗದಲ್ಲಿ ವರ್ತಮಾನ ಭವಿಷ್ಯತ್ತು, ಭೂತಭವಿಷ್ಯತ್ತು ಎಂಬವೆರಡೇ ಕಾಲಗಳ ರೂಪಗಳು ಕಂಡುಬರುತ್ತವೆ.

## TO CALL

### ಕರ್ಮಣಿ ಪ್ರಯೋಗ passive Voice.

### ವರ್ತಮಾನಭವಿಷ್ಯತ್ತು Present Intentional.

*1st Sing.* I am going to be called — ನಾನು ಕರೆಯಲ್ಪಡುವವನಿದ್ದೇನೆ, ಅಥವಾ ನನ್ನನ್ನು ಕರೆಯುವವರಿದ್ದಾರೆ.
ಇತ್ಯಾದಿ. — ಇತ್ಯಾದಿ.

### ಭೂತಭವಿಷ್ಯತ್ತು Past Intentional.

*1st Sing.* I was going to be called — ನಾನು ಕರೆಯಲ್ಪಡುವವನಿದ್ದೆನು, ಅಥವಾ ಕರೆಯುವವರಿದ್ದರು.
ಇತ್ಯಾದಿ. — ಇತ್ಯಾದಿ.

### ೪೬ ಶಬ್ದಸಂಗ್ರಹ ೮.

| | | | |
|---|---|---|---|
| Me'di-cine[1] | ೧ ವೈದ್ಯಶಾಸ್ತ್ರ, ೨ ಔಷಧ. | To dis-cuss' | ವಾದಮಾಡು, ಚರ್ಚೆ, ತರ್ಕಿಸು. |
| A the'at-tre | ನಾಟಕಗೃಹ. | To guide | ಹಾದೀ ತೋರಿಸು, ನಡಿಸು. |
| To hold | ೧ ಕೂಡಿಸು, ೨ ಹಿಡಿ. | Up'per | ಮೇಲಿನ. |
| A meet'ing | ಸಭೆ. | To fit | ಮೈಗೆ ಬರು, ಸರಿಯಾಗು. ಹೊಳತವಾಗು. |
| A pur'pose | ಉದ್ದೇಶ. | To alt'er | ಹೆಚ್ಚುಕಡಿಮೆ ಮಾಡು. |
| An ad-vi'ser | ಉಪದೇಶಕ, ಬುದ್ಧಿ ಹೇಳುವವ. | To trans-fer' | ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯು, ಸ್ಥಾನಾಂತರ ಮಾಡು. |
| The aft'er-noon | ಇಳಿಹೊತ್ತು, ಅಪರಾಹ್ನ. | Non'sense | ಗೊತ್ತುಗೆಟ್ಟ ಮಾತು, ಅಸಂಬದ್ಧ ಮಾತು, ಅರ್ಥವಿಲ್ಲದ ಮಾತು. |

1) ಇದರ ಉಚ್ಚಾರ "ಮೆಡಿಸಿನ್" ... ಉಂತ ಮಾಡಬೇಕು.

## *Present Intentional, Past Intentional, and Future Intentional Tenses.*

| | |
|---|---|
| To take a man to the the'a-tre | ಒಬ್ಬನನ್ನು ನಾಟಕ ನೋಡಲಿಕ್ಕೆ ಕರಕೊಂಡು ಹೋಗು. |
| To hold a meet'ing | ಸಭೆ ಮಾಡು, ಕೂಡಿಸು. |
| At a great length | ಸವಿಸ್ತರವಾಗಿ. |
| At last, at length | ಕಟ್ಟಕಡೆಗೆ. |
| To be gui'ded [by] | ಹಾದೀ ತೋರಿಸಿದಂತೆ ನಡೆ, ಅನುಮತಿಯಂತೆ, ಒಬ್ಬ ಹೇಳಿದ ಹಾಗೆ ಕೇಳು. |
| To hold one's tongue | ಬಾಯಿ ಮುಚ್ಚು |
| ಲಿಲಾವು ಮಾಡು | to sell by auc'tion. |
| ಬಲೆ ಒಡ್ಡು | to set a trap—a snare. |

### ಭಾಷಾಂತರಪಾಠ ೮.

೪೨ Hari is going *to* England next year to study medicine. The child *was about to fall* into the well. When *are* you *going to take* us to the theatre? We *are* not *going to hold* any more[1] meetings for that purpose. He was *going to discuss* the subject with me at great length. Are *you going to remain* here for another fortnight? He *was about to go* out. I am not to be guided[2] by such advisers. I *am* not *going to be guied*[3] by such advisers. I have not been guided[4] by such advisers. Am I to be guided by you? Who is to do this? Who is to fetch the basket out of the cellar? I am to do it. We are to stay at home all the afternoon Next summer we are to go into the country to our uncle's. Whom *are* you *going* to *send* to the post Office? He has been thinking of pur-chasing a new horse for a long time, but he has not yet done so. Do write your exercise

1) ಇನ್ನೂ ಹೆಚ್ಚಿಗೆ. 2) ನಡೆಯುಬೇಕು ಹೀಗೇನಲ್ಲ; ಅಥವಾ ನಡೆಯಬೇಕಂತಲ್ಲ. 3) ನಿಷೇಧಾರ್ಥಕ ವಾಕ್ಯಗಳಲ್ಲಿ ಭವಿಷ್ಯತ್ಕಾಲದ, ವರ್ತಮಾನಭವಿಷ್ಯತ್ಕಾಲಗಳ ಭಾಷಾಂತರವು ಕನ್ನಡದಲ್ಲಿ ಸಮವಾಗಿ ಆಗುತ್ತದೆ. I am not going to be guided by Rama=I will not be guided by Rama ನಾನು ರಾಮನ ಹೇಳಿಕೆಯಂತೆ ನಡೆಯಲಿಕ್ಕಿಲ್ಲ. 4) ನಾನು ನಡೆಯುತ್ತ ಬಂದಿರುವದಿಲ್ಲ, ನಡೆಯಲಿಲ್ಲ.

more carefully next time. Do hold your tongue for a monent Why did you not learn your lessons last night? I did learn it. The tailor has made me[1] a new coat, but it does not fit me. He will have to alter it. This medicine cured her child, and she counts every drop of it worth its weight in gold.

ಈ ಹೊತ್ತು ಅವನು ನನ್ನ ತಂದೆಗೆ ಪತ್ರ ಬರೆಯುವವನಿದ್ದಾನೆ. ನಾನು ನಿನ್ನ ಭೆಟ್ಟಿಗೆ[2] ಬರುವವನಿದ್ದೆನು; ಆದರೆ ರಾಮನು ನನ್ನನ್ನು ತನ್ನ ಸಂಗಡ ತಿರುಗಾಡಲಿಕ್ಕೆ ಕರಕೊಂಡು ಹೋದನು[3]. ಮುಂದಿನ ವರುಷ ಅವನು ರಾಮೇಶ್ವರಕ್ಕೆ ಹೋಗುವವನಿದ್ದಾನೆ. ನಾನು ತೀರ ಹೊರಟು ನಿಂತಿದ್ದೆನು. ನೀನು ನನಗೆ ಏನು ಹೇಳತಕ್ಕವನಿದ್ದೀ? ನಾನು ಹೀಗೆ ಮಾಡುವವನಿದ್ದೆನು, ಆದರೆ ಅದು ನನಗೆ ಸರಿ ತೋರಲಿಲ್ಲ. ನಾನು ಅವನ ಶಿಫಾರಸು ಮಾಡತಕ್ಕವನಿದ್ದೆನು, ಆದರೆ ಹಾಗೆ ಮಾಡಲಿಕ್ಕೆ ಅವನು ನನಗೆ ಹೇಳಿಕೊಳ್ಳಲಿಲ್ಲ. ನಮ್ಮ ಶಿಕ್ಷಕನು ಬೆಳಿಗ್ಗೆ ಬರುವವನಿದ್ದನು, ಆದರೆ ಅವನು ಬರಲಿಲ್ಲ ಇದು ಮಾರುವ ಕುದುರೆಯು. ಈ ಕುದುರೆ ಮಾರುವದದೆ. ಆ ಮನೆ ಲಿಲಾವು ಮಾಡತಕ್ಕದ್ದದೆ[4]. ನಾಳೆ ಆ ಮನೆ ಲಿಲಾವ ಆಗುವದು. ನೀನು ನನಗೆ ಆ ಮಾತು[5] ಬಹಳ ದಿವಸಗಳ ಹಿಂದೆ ಹೇಳುವವನಿದ್ದೀ, ಆದರೆ ಅದನ್ನು ನನಗೆ ಹೇಳಲೇ ಇಲ್ಲ. ನೀನು ನನಗೆ ಅದನ್ನು ಯಾವಾಗ ಹೇಳತಕ್ಕವನಿದ್ದೀ? ಅವರು ನನ್ನನ್ನೇ ಕೊಲ್ಲುವವರಿದ್ದರು, ಆದರೆ ನಾನು ಅವರ ಕೈಯೊಳಗಿಂದ ಪಾರಾದೆನು. ಈ ಮನೆ ಮುಂದಿನ ವರುಷ ಕಟ್ಟಲಾಗುವದು ಅದನ್ನು ಮುಂದಿನ ವರುಷ ಕಟ್ಟುವವರಿದ್ದಾರೆ. ನಾಳೆ ಇಷ್ಟೊತ್ತಿಗೆ ನೀನು ಪುಣೆಗೆ ಹೊರಟು ನಿಂತಿರುವಿ[6]. ಬೇಟೆಗಾರನು ಹುಲಿಯನ್ನು ಹಿಡಿಯುವದಕ್ಕಾಗಿ ಬಲೆ ಒಡ್ಡತಕ್ಕವನಿದ್ದಾನೆ.

## ೪೮ ಶಬ್ದಸಂಗ್ರಹ ೯.

| | | | |
|---|---|---|---|
| To blos'som | ಹೂವಾಗು, ಅರಳು, ವಿಕಸಿತವಾಗು. | A Pre-cau'tion | ಮುಂದಾಗಿ ಮಾಡಿಟ್ಟ ಹಂಚಿಕೆ, ಅನಿಷ್ಟ ನಿವಾರಣೋಪಾಯ. |
| To pre-tend' | ನೆವ ಹೇಳು, ಸೋಗು ಮಾಡು, ನಟನೆ ಮಾಡು. | To ac-cept' | ಅಂಗೀಕರಿಸು, ತಕ್ಕೊಳ್ಳು, ಪರಿಗ್ರಹಿಸು. |

1) Me-for me. 2) To see you, to call upon you. 3) Took me with him for a walk. 4) Is to be sold by auction. 5) It 6) Will be about to go.

## *Present Intentional, Past Intentional and Future Intentional Tenses.*

| | | | |
|---|---|---|---|
| A con-si-de'ra'tion | ವಿಚಾರ, ಆಲೋಚನೆ, ಯೋಚನೆ. | To tire<br>To weary,<br>To fa-tigue | ದಣಿಸು, ಆಯಾಸಗೊಳಿಸು. |
| To a-dopt' | ೧ ಸ್ವೀಕರಿಸು, ೨ ದತ್ತಕ ಮಾಡಿಕೊಳ್ಳು, ತಕ್ಕೊಳ್ಳು, ಅನುಕರಿಸು. | A meas'ure | ಉಪಾಯ, ಹಂಚಿಕೆ. |
| An act | ಕೃತ್ಯ. | An oc-ca'sion | ಸಮಯ, ಪ್ರಸಂಗ. |
| Time'ly | ತಕ್ಕ ಸಮಯದ, ಸಮಯೋಚಿತ. | Con'science | ಮನಸ್ಸಾಕ್ಷಿ, ಸದಸದ್ವಿವೇಕ ಬುದ್ಧಿ. |
| To ren-der | ಕೊಡು, ಮಾಡು. | To rub | ತಿಕ್ಕು, ಉಜ್ಜು. |
| To com pel',<br>To o-blige | ಅಗತ್ಯಪಡಿಸು, ಒತ್ತಾಯಪಡಿಸು. | In-debt'ed | ಹಂಗಿನೊಳಗಿದ್ದ, ಋಣದೊಳಗಿದ್ದ. |
| An obli-ga'tion | ಹಂಗು. | Kind'ness | ಕೃಪೆ, ದಯ, |

To be in-flu-enced (by) — (ಯಾತರಿಂದಾದರೂ) ಮನಸು ಒಲೆ,—ಎಳೆ, ಪ್ರಭಾವಕ್ಕೆ ಒಳಗಾಗು.

To adopt a meas'ure, or rem'edy — ಉಪಾಯ ಮಾಡು, ಹಂಚಿಕೆ.

To take pre-cau'tions — ಮುಂಜಾಗ್ರತೆ ಕೈಕೊಳ್ಳು, ಅನಿಷ್ಟ ನಿವಾರಣೋಪಾಯ ಮಾಡು.

To be much obliged' to, to be under great ob-liga'tion (to) — ಬಹಳ ಹಂಗಿನೊಳಗಿರು, ಬಹಳ ಉಪಕಾರದೊಳಗಿರು, ತುಂಬಾ ಉಪಕೃತನಾಗು.

To place a man un'der an ob-liga'tion — ಒಬ್ಬರನ್ನು ಹಂಗಿನೊಳಗೆ ಹಾಕು.

To con-fer' a fa'vour on a man — ಒಬ್ಬರ ಮೇಲೆ ಉಪಕಾರ ಮಾಡು.

To be in-debt'ed to — (ಉಪಕಾರದ ಬಗ್ಗೆ) ಋಣದೊಳಗಿರು.

To be in-need (want) of some'thing — ಯಾತರದಾದರೂ ಕೊರತೆ ಇರು, ಏನಾದರೂ ಬೇಕಾಗಿರು.

An act of kind'ness — ಉಪಕಾರ.

To ren'der as-sis'tance — ಸಹಾಯ ಮಾಡು.

On your part — ನಿನ್ನ ಕಡೆಯಿಂದ, ನಿನ್ನ ಮಟ್ಟಿಗೆ.

To ac-cept an of'fer — ಕೊಡಲಿಕ್ಕೆ ಬಂದ ವಸ್ತುವನ್ನು ಸ್ವೀಕರಿಸು.

To com-ply' with a re-quest' — ಬಿನ್ನಹ ಮಾನ್ಯ ಮಾಡು.

To show kind'ness to a man — ಒಬ್ಬರ ಮೇಲೆ ದಯಮಾಡು.

To be kind to one — ಒಬ್ಬರ ಮೇಲೆ ದಯವಿರು.

ಹೊತ್ತು ದೊರೆ, ಪುರಸತ್ತು ಆಗು — to find time, to have lei'sure.

ನೆಟ್ಟಗನಿಸು, ಸೊಗಸಾಗು — to feel well.

ಸದ್ಯಕ್ಕೆ, ಈಗ — at present

## ಭಾಷಾಂತರಪಾಠ ೯.

೪೯ The trees have had scarcely any blossoms[1]. What *is going to happen*? They pretend to be ignorant of the whole affair. When is your new house *going to be built*[2]? We *are* not going *to be influenced* by any such consideration. I *am about to adopt* the same measures. You had better take the same precautions. I would rather[3] not accept such an offer. I had much rather stay at home than weary myself for nothing. I shall be very much wanted on such an occasion. To have a good concience is better than to have great riches. He flatters me in order to deceive me more easily[4]. There has never been a man without faults. I am (very much or greatly) obliged to you for the great kindness you showed[5] me, when I was so much[6] in need of it. I am under great obligation to him for the timely assistance which he rendered to me. I am under great obligation for this act of kindness on your part. I am greatly indebted to you for this act of kindness on your part. I was obliged to comply with his request. I obliged him to do it.

ಅವನು ತಿರುಗಿ ಬರುವವನಿದ್ದನು. ಈ ಮನೆಯನ್ನು ಹೋದ ವರುಷ ಕಟ್ಟುವವರಿದ್ದರು[7]. ನಾನು ಮನೆಯೊಳಗೆ ಇರುವವನಿದ್ದೆನು, ಆದರೆ ನನಗೆ ವೈದ್ಯನ ಮನೆಗೆ ಹೋಗತಕ್ಕದ್ದಿತ್ತು. ನಿನಗೆ ಈಗ ಏನು ಮಾಡತಕ್ಕದ್ದದೆ? ನಾನು ಹೀಗೆ ಮಾಡಬೇಕಾಯಿತ್ತು[8]. ಗೋವಿಂದನು ಈ ಹೊತ್ತು ಸಾಯಂಕಾಲಕ್ಕೆ ಸುಮಾರು ಐದೂವರೆ ಗಂಟೆಗೆ ಸಮುದ್ರ ತೀರದ ಮೇಲೆ ಆಡ್ಡಾಡಲಿಕ್ಕೆ ಹೋಗುವವನಿದ್ದಾನೆ. ನೀನು ದಿನಕ್ಕಿಂತ ಬೇಗ ಬರಬೇಕಾಗುವದು. ನಾಳೆ ಮಧ್ಯಾಹ್ನದಲ್ಲಿ ನಿನ್ನ ಕೂಡ ಮಾತಾಡಲಿಕ್ಕೆ ನನಗೆ ಪುರಸತ್ತು ಆಗಲಿಕ್ಕಿಲ್ಲ; ಆಗ ನಮ್ಮ ಮನೆಗೆ ಕೆಲವರು

1) ಗಿಡಗಳಿಗೆ ಹೂ ಬಿಟ್ಟೀ ಇಲ್ಲೊಂದರೂ ಅಡ್ಡಿ ಇಲ್ಲ. 2) ಯಾವಾಗ ಕಟ್ಟಲ್ಪಡತಕ್ಕದ್ದು; 3) I would rather ನನಗೆ ಉತ್ತಮ ಕಾಣುತ್ತದೆ. 4) ಸಹಜವಾಗಿ, ಅನಾಯಾಸದಿಂದ. 5) ನೀನು ಮಾಡಿದ. 6) So much = greatly, ಬಹಳ. 7) To be built, to be erected. 8) Was obliged.

ಅತಿಥಿಗಳು ಬರತಕ್ಕವರಿರುವರು[1]. ಹೀಗೆ ಇರಲಿ. ಹೀಗೆ ಉಂಟೋ? ಅವನ ತಂಗಿಗೆ ಜ್ವರ ಬಂದಿದ್ದವು[2]; ಈಗ ಆಕೆಗೆ ಹೇಗೆ ಅದೆ? ನೀವು ಕ್ಷೇಮದಿಂದಿದ್ದೀರಾ? ನನಗೆ ಇತ್ತಿತ್ತ ನೆಟ್ಟಗನಿಸುವದಿಲ್ಲ. ನನಗೆ ಈಗ ದುಡ್ಡಿನ ಅಡಚಣಿ ಬಹಳ ಅದೆ[3]. ನನ್ನ ಮೇಲೆ ತಮ್ಮ ಉಪಕಾರವಾಯಿತು[4]. ಈ ಬಗ್ಗೆ ನನ್ನ ಮೇಲೆ ತಮ್ಮ ಉಪಕಾರವು ಬಹಳ ಆಗಿದೆ. ನೀವು ನನ್ನ ಮೇಲೆ ಬಹಳ ಉಪಕಾರಗಳನ್ನು ಮಾಡಿದ್ದೀರಿ. ಆ ಬಗ್ಗೆ ನಾನು ನಿಮ್ಮ ಹಂಗಿನೊಳಗೆ ಬಹಳ[5] ಇದ್ದೇನೆ. ಈಗಿನ[6] ನನ್ನ ದೊಡ್ಡಿಸ್ತಿಕೆಯ ಬಗ್ಗೆ ನಾನು ನಿಮ್ಮ ಋಣದೊಳಗೆ ಬಹಳ ಇದ್ದೇನೆ. ನಿನ್ನ ಪತ್ರವನ್ನು ಓದಲಿಕ್ಕೆ ನನಗೆ ಪುರಸತ್ತು ಆಗಲಿಲ್ಲ. ಅವನು ನನ್ನ ಮೇಲೆ ಬಹಳ ಉಪಕಾರ ಮಾಡುವವನಿದ್ದಾನೆ. ನಿನ್ನ ಮೇಲೆ ಅವನು ದೊಡ್ಡ ದೊಡ್ಡ ಉಪಕಾರಗಳನ್ನು ಮಾಡಿದ್ದಾನೆ. ನಮಗೆ ನಾಳೆ ರಜಾ ಸಿಗತಕ್ಕದ್ದದೆ[7].

---

## ೭ ನೇ ಪಾಠ.

### Should, Ought, Must.

೫೦ Should ಎಂಬದು shall ಎಂಬ ಸಹಾಯ ಕ್ರಿಯಾಪದದ ಭೂತಕಾಲದ ರೂಪವಿದ್ದು ಅದನ್ನು shall ದಂತೆಯೇ ಉಪಯೋಗಿಸುವರು. ಆದರೆ ಒಮ್ಮೊಮ್ಮೆ should ಎಂಬದು ಮುಖ್ಯ ಕ್ರಿಯಾಪದವೆಂದು ತಿಳಿದು ಅದರ ಮುಂದೆ ಕ್ರಿಯಾವಾಚಕವನ್ನು ಇಡಲಾಗಿ[8], ಕರ್ತೃ ಇಂಥ ಕ್ರಿಯೆಯನ್ನು ಮಾಡಬೇಕು ಎಂಬ ಅರ್ಥವಾಗುತ್ತದೆ. ಉದಾ—

What *should* we do? ನಾವು ಏನು ಮಾಡಬೇಕು?

You *shonld* pay the money immediately ನೀನು ಆ ಹಣವನ್ನು ಕೂಡಲೇ ಕೊಡಬೇಕು.

---

1) Will be about to come ಬರತಕ್ಕ=ಬರುವ. 2) Was attacked by fever, was laid up with fever, was ill with fever, had fever. 3) I am greatly in need of. 4) I thank you. 5) Greatly, much. 6) Present. 7) Going to get, going to have. 8) Shall, should; will, would; may, might; can, could: must ಮುಂತಾದವುಗಳ ಮುಂದೆ ಕ್ರಿಯಾಪದದ to ಲೋಪವಾಗುತ್ತದೆ.

೫೧ ವಾಕ್ಯದೊಳಗೆ ought ಎಂಬ ಕ್ರಿಯಾಪದವಿದ್ದು ಅದರ ಮುಂ ಕ್ರಿಯಾವಾಚಕವು ಬಂದರೆ, ಕರ್ತೃವು ಇಂಥ ಕ್ರಿಯೆಯನ್ನು ಮಾಡತಕ್ಕದ್ದು ಎಂ ಅರ್ಥವಾಗುತ್ತದೆ. ಉದಾ—

**You ought to do so** ನೀನು ಹೀಗೆ ಮಾಡತಕ್ಕದ್ದು.

೫೨ ಬಹುತರವಾಗಿ ಎಷ್ಟೋ ವಾಕ್ಯಗಳಲ್ಲಿ should ಎಂಬದಕ್ಕೆ ಬದಲ ought ಎಂಬ ಶಬ್ದವನ್ನು ಹಾಕಿದರೂ ಸಾಗುತ್ತದೆ. ಆದರೆ ಇವುಗಳ ಅರ್ಥಗಳ ಏನೂ ಭೇದವಿಲ್ಲೆಂದು ಹೇಳಕೂಡದು. ಇವೆರಡೂ ಶಬ್ದಗಳು ಕರ್ತವ್ಯವನ್ನು ತೋರಿಸುತ್ತವೆ. ಆದರೆ ought ಎಂಬ ಶಬ್ದದೊಳಗಿನ ಕರ್ತವ್ಯವು ಹೆಚ್ಚು ಬಲವತ್ತರವಾದದ್ದು. ಉದಾ—

**You *should* do so** ನೀನು ಹೀಗೆ ಮಾಡಬೇಕು; ಅಂದರೆ ಹೀಗೆ ಮಾಡುವ ರಿಂದ ನಿನಗೆ ಹಿತವಾಗುವದು,

**You ought to do so** ನೀನು ಹೀಗೆ ಮಾಡತಕ್ಕದ್ದು; ಅಂದರೆ ಹೀಗೆ ಮಾಡು ವದು ನಿನ್ನ ಕರ್ತವ್ಯವು.

**You *should* go for a walk every evening** ದಿನಾಲು ಸಾಯಂಕಾಲ ನೀನು ತಿರುಗಾಡಲಿಕ್ಕೆ ಹೋಗಬೇಕು; ಅಂದರೆ ದಿನಾಲು ಸಾಯಂಕಾಲದಲ್ಲಿ ತಿರುಗಾಡಲ್ಲಿ ಹೋಗುವದು ನಿನಗೆ ಹಿತಕರವಾದದ್ದು.

**Children *ought* to obey their parents** ಚಿಕ್ಕ ಮಕ್ಕಳು ತಮ್ಮ ತಂ ತಾಯಿಗಳ ಮಾತು ಕೇಳತಕ್ಕದ್ದು.

ಆದರೆ ಒಮ್ಮೊಮ್ಮೆ should ಎಂಬ ಶಬ್ದಕ್ಕೆ ought ಎಂಬದರ ಅರ್ಥ ಬರುತ್ತದೆ. ಹೇಗಂದರೆ ಮೇಲಿನ ವಾಕ್ಯದಲ್ಲಿ children ought to ಎಂ ದಕ್ಕೆ ಬದಲಾಗಿ children should ಅಂದರೆ ಏನೂ ಅಡ್ಡಿ ಇಲ್ಲ. ಇದೆ ಮೇರೆಗೆ ought ಎಂಬ ಶಬ್ದವು ಯಾವಾಗಲೂ ಕರ್ತೃವಿನ ಕರ್ತವ್ಯವನ್ನು ತೋರಿಸುತ್ತದೆಂದು ಹೇಳಕೂಡದು. ಆದುದರಿಂದ, should ಎಂಬದಕ್ಕೆ ಬದಲಾ ought ಅಥವಾ ought ಎಂಬದಕ್ಕೆ ಬದಲಾಗಿ should ಹಾಕಿದರೂ ಎಷ್ಟೋ ಕಡೆಯಲ್ಲಿ ಸಾಗಬಹುದು. ಆದಾಗ್ಯೂ ಇವೆರಡೂ ಶಬ್ದಗಳಲ್ಲಿರುವ, ಮೇಲೆ ತೋರಿ ಸಿದ ಮೂಲ ಭೇದವು ವಿದ್ಯಾರ್ಥಿಗಳ ಲಕ್ಷದಲ್ಲಿರತಕ್ಕದ್ದು.

೫೩. ಕರ್ತೃವು ಇಂಥ ಕ್ರಿಯೆಯನ್ನು ಮಾಡಲೇಬೇಕು, ಮಾಡುವದು ಅವಶ್ಯವುಂಟು ಎಂಬ ಅರ್ಥದಿಂದ must ಎಂಬ ಕ್ರಿಯಾಪದವನ್ನು ಪ್ರಯೋಗಿಸಿ ಅದರ ಮುಂದೆ ಕ್ರಿಯಾವಾಚಕವನ್ನು ಇಡಬೇಕು. ಉದಾ—

I *must* do so { ನಾನು ಹೀಗೆ ಮಾಡಲಿಕ್ಕೇ ಬೇಕು.<br>ನಾನು ಹೀಗೆ ಮಾಡುವದು ಅವಶ್ಯವದೆ.

೫೪ Should, ought, must ಎಂಬ ಕ್ರಿಯಾಪದಗಳು ಮೂರೂ ಪುರುಷಗಳಲ್ಲಿಯೂ[1] ಎರಡೂ ವಚನಗಳಲ್ಲಿಯೂ ಬಹುತರವಾಗಿ ಸಮವಾಗಿ ನಡೆಯುತ್ತವೆ. ಅವುಗಳ ವರ್ತಮಾನಕಾಲವೂ, ಭವಿಷ್ಯತ್ಕಾಲವೂ ಸರಿಯಾಗಿರುತ್ತವೆ. ಮತ್ತು ಭವಿಷ್ಯತ್ಕಾಲದ ಅರ್ಥವು ಕ್ರಿಯಾವಿಶೇಷಣದ ಸಹಾಯದಿಂದ ಸ್ಪಷ್ಟವಾಗುತ್ತದೆ. ಭೂತಕಾಲದಲ್ಲಿ ಸಹ ಈ ಕ್ರಿಯಾಪದಗಳ ರೂಪಗಳು ಬದಲಾಗದೆ ಹಾಗೆಯೇ ಉಳಿಯುತ್ತವೆ; ಆದರೆ ಆಗ ಮುಂದೆ ಪೂರ್ಣ ಕ್ರಿಯಾವಾಚಕವನ್ನು ಹಾಕಬೇಕಾಗುತ್ತದೆ. ಉದಾ—

| | |
|---|---|
| I (You, he or we) *must* go | { ನಾನು (ನೀನು, ಅವನು ಅಥವಾ ನಾವು) ಹೋಗಲಿಕ್ಕೇ ಬೇಕು. |
| I *must* go *to-morrow* | ನಾನು ನಾಳೆ ಹೋಗಲಿಕ್ಕೇ ಬೇಕು. |
| He *should* have gone | ಅವನು ಹೋಗತಕ್ಕದ್ದಿತ್ತು[2]. |
| You *ought* have told him so | ನೀನು ಅವನಿಗೆ ಹೀಗೆ ಹೇಳತಕ್ಕದ್ದಿತ್ತು. |
| He *must* have gone | ಅವನು ಹೋಗಿರಲಿಕ್ಕೆ ಬೇಕು. |

೫೫ ನಿಷೇಧಾರ್ಥಕ ವಾಕ್ಯಗಳಲ್ಲಿ ಸಹ should, ought ಎಂಬವುಗಳು ಕರ್ತವ್ಯವನ್ನೂ must ಎಂಬದು ಪ್ರತಿಬಂಧವನ್ನೂ ತೋರಿಸುತ್ತವೆ. ಉದಾ—

| | |
|---|---|
| You *should* not go | ನೀನು ಹೋಗಬಾರದು |
| You *ought not* to go | ನೀನು ಹೋಗತಕ್ಕದ್ದಲ್ಲ. |
| You must *not* go | { ನೀನು ಹೋಗಲಾಗದು.<br>ನೀನು ಹೋಗಕೂಡದು. |

1) ದ್ವಿತೀಯ ಪುರುಷ ಏಕವಚನದಲ್ಲಿ ಮಾತ್ರ shouldst, Oughtst ಎಂಬ ರೂಪಗಳಾಗುತ್ತವೆ. 2) ಅವನು ಹೋಗಬೇಕಾಯಿತು he *had to go*, ಅವನಿಗೆ ಹೋಗುವದಿತ್ತು he *was to go*. ಅವನು ಹೋಗುವವನಿದ್ದನು he *was* going to go, he was *about to go.*

## ೫೬. ಶಬ್ದಸಂಗ್ರಹ ೧೦.

| | | | |
|---|---|---|---|
| To con-cil'i-ate | ತನ್ನವನನ್ನಾಗಿ ಮಾಡಿಕೊ, ಒಲಿಸಿಕೊ, ಅನುಕೂಲ ಮಾಡಿಕೊ. | To ex'ecute | ನೆರವೇರಿಸು, ಈಡೇರಿಸು, ಸಿದ್ಧಿಗೆ ಒಯ್ಯು. |
| Duty | ಕರ್ತವ್ಯ, ಧರ್ಮ. | A pass | ಕಣಿವೆ. |
| A native (of) | ದೇಶೀಯ ಮನುಷ್ಯ. | Neat | ಚಂದ, ಮಾಟ್ಟ... |
| A lan'guage | ಭಾಷೆ. | Nea'tly | ನೆಟ್ಟಗೆ, ಮಾಟಾಗಿ, ಅಚ್ಚುಕಟ್ಟಾಗಿ. |
| A state'ment | ಮಾತು, ಹೇಳಿಕೆ, ಜವಾಬು. | | |
| Gov'ern-ment | ಸರಕಾರ. | To in-ter'pret | ಅರ್ಥ ಹೇಳು, ವಿವರಣೆ ಮಾಡು. |
| Grate'ful | ಕೃತಜ್ಞ. | To at-tend' | ಹಾಜರಾಗು, ಇರು. |

| | | | |
|---|---|---|---|
| ಕೃತಘ್ನ | un-grate'ful. | ಜುಲುಮೆ | op-pres'sion. |
| ಶಿಕ್ಷೆ | pun'ish-ment. | ಸರ್ವಶಕ್ತ, ಸರ್ವಶಕ್ತಾತ್ರಾಣಿ | the Almighty |
| ಗಣಿತ | mathe-matics. | (ದೇವ-) ಆಜ್ಞೆ | a com-mand'ment |

| | |
|---|---|
| A nar'row pass | ಇಕ್ಕಟ್ಟಾದ ಕಣಿವೆ. |
| In per'son | ಸ್ವತಃ. |
| In our per'sons | ನಮ್ಮ ಮೈ ಕೈಗಳಿಂದ. |
| Na'tives of in'di-a | ಹಿಂದುಸ್ತಾನದ ನಿವಾಸಿಗಳು. |
| To get up | (ಮಲಗಿ) ಏಳು. |
| To keep in mind | ಮನಸ್ಸಿನಲ್ಲಿಡು, ನೆನಪಿನಲ್ಲಿಡು. |

| | |
|---|---|
| ಕಲ್ಯಾಣಾರ್ಥವಾಗಿ | for the Wel'fare of. |
| ಆದಷ್ಟು ಶೀಘ್ರ | as soon as pos'si-ble. |
| ಲೆಕ್ಕ ಇಡು | to keep an ac-count' of. |
| ಜಡತಿ ಕೊಡು, ಲೆಕ್ಕಾ ಕೊಡು, ಜವಾಬು ಕೊಡು, ವಿವರಿಸಿ ಹೇಳು | to ten'der an ac-count' of. |
| ಸಂಗತಿ ಹಿಡಿ, ಜೊತೆಯಾಗು | to keep com'pa-ny with. |
| ರಾತ್ರಿಯಲ್ಲಿ | at night. |
| ಬಗ್ಗೆ, ಗೋಸ್ಕರ, ಪರವಾಗಿ | on ac-count' of. |
| ಮೂರು ದಿವಸಗಳ ವರೆಗೆ | for three days. |
| ಜುಲುಮೆ ಮಾಡು | to op-press, to prac'tise op-pression upon |

ಭಾಷಾಂತರಪಾಠ ೧೦.

೫೭. We *must go* soon. We *should* always prefer duty to pleasure. We *should* always conciliate others. He *must* work. It *must* be so. He *must* have society. It is strange that you *should* say so[1]. *Ought* every native of British India to learn English? There is at least one school in every Zilla, where Engilsh is taught, It is a very difficult language for Indians to learn. All petitions to Govemment *must* be written in English. There are other reasons why English *ought* to by studied by the natives of India. Xerxes had to march through a narrow pass between the mountains and the sea. We *ought* to love our parents. Why did you not come in person to take back your money? We *should* be neat and clean in our persons. We *aught* always to speak the truth. We *ought* to obey the laws. You *ought* never to forget the kindness he has shown you. Exercise should be written carefully, and neatly, and *should* then be shown to the teacher.

Judges *ought* to remember that their duty is to interpret law[2] and not to make laws. My brother had to attend the court in person. Why do you not attend the evening lessons? It is one thing to know what we *ought* to do, and another[3] to execute it. Something must be done. Who is making that noise in the next room? It *must* be Shankar. Children *ought* to be obedient to their parents and teachers. You *should* get up at five o'clock in the morning and go to bed at nine at night. I *must* go home for it is very late. I *ought* to be at home at this time. All must die; that is the truth. which we *ought* to (*should*) keep constantly in mind. Where have you been[4] my children? We have been in the garden. Always do your duty and let others think what they please.

---

1) ನೀನು ಹೀಗೆ ಅನ್ನುವದು ವಿಲಕ್ಷಣವಾದದ್ದು. 2) ಕಾಯಿದೆ ಮಾಡುವದು, ಅಮಲಿನಲ್ಲಿ ತರುವದು. 3) It is another thing. 4) ಎಲ್ಲಿ ಹೋಗಿದ್ದಿರಿ?

ಅವನು ಹೋಗಬೇಕು. ಅವನು ಹೋಗತಕ್ಕದ್ದಿತ್ತು. ನೀನು ಹ ಮಾಡತಕ್ಕದ್ದಿದ್ದಿಲ್ಲ. ಮೀನುಗಳು ನೀರೊಳಗೆ ಇರಲಿಕ್ಕೇಬೇಕು[1]. ಈ ಹೊ ಸಾಯಂಕಾಲದ ಆರು ಗಂಟೆಗೆ ನಾನು ಇವನಿಗೆ ಕಳಿಸಲಿಕ್ಕೆ ಬೇಕು. ಸ ಮಕ್ಕಳು ರಾತ್ರೀ ಬೇಗ[2] ಮಲಗಬೇಕು. ನೀನು ಆ ವೇಳೆಯಲ್ಲಿ ಹೊರಗೆ ಹೋ ಬೇಕು. ನೀನು ಆ ಕಾಲಕ್ಕೆ ಅವನ ಭೆಟ್ಟಿಗೆ ಹೋಗತಕ್ಕದ್ದಿತ್ತು. ಅವನ ತಂದೆ ಅವನಿಗೆ ಓದುಬರಹ ಕಲಿಸತಕ್ಕದ್ದಿತ್ತು. ಅವನು ಹೋಗಿರಬೇಕು. ಹೀಗೆ ಲಿಕ್ಕೆ ಬೇಕು. ಆತನು ಈ ಪತ್ರ ಬರೆದಿರಬೇಕು. ಈ ಹುಡುಗನು ಹದಿನ ವರ್ಷದವನಿರಬೇಕು. ಇಲ್ಲಿಂದ ಆ ಹಳ್ಳಿಯು ಸುಮಾರು ಐದು ಮೈಲು ದ ಇರಬೇಕು. ರಾಮನು ತನ್ನ ವಚನವನ್ನು ಮರೆತಿರಬೇಕು. ನೀನು ನಿನ್ನ ವ ಪಾಲಿಸಬೇಕು. ಇವನು ಆ ಗಡಿಯಾರವನ್ನು ಕದ್ದಿರಬೇಕು. ಮೂರು ದಿ ಗಳ ವರೆಗೆ ಅವನು ಅನ್ನವಿಲ್ಲದೆ ಇದ್ದನು. ಮೂರು ದಿವಸದಿಂದ[3] ಅನ್ನವಿ ಇದ್ದಿರಲಿಕ್ಕೆ ಬೇಕು. ಮೂರು ದಿವಸಗಳ ವರೆಗೆ ಅವನು ಅನ್ನವಿಲ್ಲದೆ ಇರ ದ್ದಿತ್ತು. ಮೂರು ದಿವಸಗಳ ವರೆಗೆ ಅವನು ಅನ್ನವಿಲ್ಲದೆ ಇದ್ದಿರಬೇಕು. ಆರು ಗಂಟೆ ಆಗಿರಬೇಕು. ಸುಮಾರು ಆರು ಗಂಟೆ ಆಗಿರಬೇಕು ಆರು ಬಡಿ ಲಿಕ್ಕೆ ಬಂದದೆ[4]. ತೀರ ಆರು ಬಡಿಯಲಿಕ್ಕೆ ಬಂದದೆ[5].

ನಮ್ಮ ನೆಂಟರು ಈಗ ಪುಣೆಗೆ ಮುಟ್ಟಿರಬೇಕು. ನೀವು ಆತುರವುಳ್ಳವ ಬಾರದು. ಇಂಥ ಮಾತು ನೀನು ನನಗೆ ಹೇಳಬಾರದು. ಅರಸು ಪ್ರಜೆಗಳ ಮೇ ಜುಲುಮೆ ಮಾಡಬಾರದು. (ತನ್ನ) ಪ್ರಜೆಗಳ ಕಲ್ಯಾಣಾರ್ಥವಾಗಿ ಅರಸು ಸ್ವ ಕೆಲವು ಅಡಚಣೆಗಳನ್ನು ಸಹಿಸಬೇಕು. ಬೇಕಾದರೆ[6], ನೀವು ಅಲ್ಲಿ ಕು ಕೊಳ್ಳಿರಿ; ಆದರೆ ನೀವು ಸ್ವಲ್ಪವಾದರೂ[7] ಗದ್ದಲ ಮಾಡಕೂಡದು. ಇಂಥ ದು ಕೃತಘ್ನ ಮನುಷ್ಯನ ಸಂಗತಿ ಹಿಡಿಯಬೇಡ. ಈ ಪದಾರ್ಥಗಳನ್ನು ತಕ್ಕೊ ನಮಗೆ ಏನು ಮಾಡತಕ್ಕದ್ದದೆ[8]? ನೀನು ಹೀಗೆ ಯಾಕೆ ಮಾಡಬೇ ನಾವು ಇದನ್ನು ಯಾಕೆ ಮಾಡಬೇಕು? ಹೀಗೆ ಮಾಡಲಿಕ್ಕೆ ನಾವು ಅವ ಯಾಕೆ ಉತ್ತೇಜನ ಕೊಡಬಾರದು? ನೀನು ಇತ್ತಿತ್ತ ಚನ್ನಾಗಿ ಅಭ್ಯಾಸ ಮಾ ವದಿಲ್ಲ; ನಿನ್ನ ಮನಸ್ಸಿನಲ್ಲಿ ಏನು ಮಾಡತಕ್ಕದ್ದದೆ? ನಾನು ಅದಷ್ಟು ಕ

---

1) Must live. 2) Early, at an early hour. 3) For t last three days 4) It is about (ಅ. nearly) six o'clock' It is almost six o'clock' ಅ. It will just be six o'clock. 6) Wh you like. 7) ಸ್ವಲ್ಪವಾದರೂ any! ಸ್ವಲ್ಪವಾದರೂ ಇಲ್ಲ no. 8) have we to do with these things?

ವಾಗಿ ಕಲಿಯಲಿಕ್ಕೆ ಬೇಕು. ನಾನು ಈ ಯಾವತ್ತು ಸಂಗತಿಗಳ ಲೆಕ್ಕಾ ಇಡಬೇಕಾಗುವದು. ಈ ಪಾಪಗಳ ಬಗ್ಗೆ ನೀನು ಸತ್ತ ತರುವಾಯ ದೇವರ ಮುಂದೆ[1] ಜಡತಿ ಕೊಡಬೇಕಾಗುವದು. ಇಂಥ ಅಪರಾಧಕ್ಕೆ ನಿನಗೆ ಮರಣಕ್ಕಿಂತಲೂ ಹೆಚ್ಚಿನ ಶಿಕ್ಷೆ ಇರತಕ್ಕದ್ದು[2]. ನಾನು ಗಣಿತ ಕಲಿಯಬೇಕು. ನೀನು ನನಗೆ ಬಯ್ಯುದಿದ್ದರೆ, ನಿನ್ನ ತಂದೆ ಬಯ್ದಿರಬೇಕು. ನಮ್ಮನ್ನು ಹುಟ್ಟಿಸಿದಂಥ[3], ಯಾವಾಗಲೂ ಸಾಕಿ ಸಲಹುವಂಥ ದೇವರ ಆಜ್ಞೆಗಳನ್ನು ನಾವು ಪಾಲಿಸಬೇಕು[4].

---

## ೮ ನೇ ಪಾಠ.

## MAY, CAN.

೫೮ May ಮತ್ತು Can ಎಂಬವು ಈಗ ಇಂಗ್ಲಿಷದಲ್ಲಿ ಸಹಾಯ ಕ್ರಿಯಾಪದಗಳೆಂದು ತಿಳಿಯುತ್ತಾರೆ. ಆದರೆ ಮೂಲತಃ ಅವು ಸಹಾಯ ಕ್ರಿಯಾಪದಗಳಲ್ಲ. ಅವುಗಳ ಮುಂದೆ ಬರುವ ಕ್ರಿಯಾವಾಚಕದ to ಲೋಪವಾಗುತ್ತದೆ. May ಎಂಬದರ ದ್ವಿತೀಯ ಪುರುಷದ ಏಕವಚನದ ರೂಪವು Mayest ಎಂತಲೂ, Can ಎಂಬದರದು Canst ಎಂತಲೂ ಆಗುತ್ತದೆ.

| | |
|---|---|
| You *may* go | ನೀನು ಹೋಗಬಹುದು ಅಥವಾ ನಿನಗೆ ಹೋಗಲಿಕ್ಕೆ ಅಪ್ಪಣೆಯುಂಟು. |
| I *can* swim | ನಾನು ಈಸಬಲ್ಲೆನು, ಅಥವಾ ನನಗೆ ಈಸಲಿಕ್ಕೆ ಬರುತ್ತದೆ. |

೫೯ May ಎಂಬ ಕ್ರಿಯಾಪದಕ್ಕೆ ಮುಖ್ಯವಾಗಿ ಮೂರು ಅರ್ಥಗಳು.

೧ ಅಪ್ಪಣೆ ಅಥವಾ ಪರವಾನಗಿ. ಉದಾ—

| | |
|---|---|
| *May* I go sir? | ಸ್ವಾಮೀ ನಾನು ಹೋಗಲೇನು? |
| *May* I tell him so? | ನಾನು ಅವನಿಗೆ ಹೀಗೆ ಹೇಳಲೇನು? |

---

1) To, before, ಅ. in the presence of. 2) Have, receive. 3) To create. 4) To observe, to keep.

೮ ಯಾವದಾದರೊಂದು ಸಂಗತಿ ಆಗುವ ಸಂಭವ ಇಲ್ಲವೆ ಅದರ ಬ
ಸಂಶಯು. ಉದಾ—

It *may* rain this evening — ಇಂದು ಸಂಜೆಗೆ ಮಳೆ ಬಂದೀತು.
It *may* be so — ಅದು ಹೀಗೆ ಇರಬಹುದು.
I *may* come — ನಾನು ಬಂದರೆ ಬಂದೇನು.

೯ ಇಚ್ಛೆ ಇಲ್ಲವೆ ಆಶೀರ್ವಾದ ಈ ಅರ್ಥವಿರಲು, May ಎಂಬ
ವಾಕ್ಯದ ಆರಂಭದಲ್ಲಿ ಬರುತ್ತದೆ. ಆಗ ಅದನ್ನು ಉಳಿದ ಶಬ್ದಗಳಿಂದ ಸ್ವ
ಹೆಚ್ಚು ಒತ್ತಿ ಉಚ್ಚರಿಸಬೇಕಾಗುತ್ತದೆ. ಉದಾ—

*May* he come ! — ಅವನು ಬರಲಿ !
*May* you be happy! — ನಿನಗೆ ಕಲ್ಯಾಣವಾಗಲಿ !

೬೦ Can ಎಂಬ ಕ್ರಿಯಾಪದವು ಶಕ್ಯತೆಯನ್ನಾಗಲಿ, ಸಾಮರ್ಥ್ಯ
ವನ್ನಾಗಲಿ ತೋರಿಸುತ್ತದೆ. ಉದಾ—

He *can* write — ಅವನು ಬರೆಯಬಲ್ಲನು.
I *cannot*[1] tell you more about it — ಅದರ ವಿಷಯಕ್ಕೆ ನಾನು ನಿಮ ಹೆಚ್ಚಿಗೆ ಹೇಳಲಾರೆನು.

೬೧ To be able ಸಮರ್ಥ ಇರು ಎಂಬದರ ಅರ್ಥವು can ಎಂಬ
ಅರ್ಥದಂತೆ ಆಗುತ್ತದೆಂದರೂ ಸಲ್ಲುವದು. Able ಎಂಬದಕ್ಕೆ ವಿರೋಧಾ
ಶಬ್ದವು unable ಅಸಮರ್ಥ ಎಂಬದು. ಉದಾ—

I *am unable* to go — ನಾನು ಹೋಗಲಾರೆನು.

೬೨ May, can ಎಂಬ ಶಬ್ದಗಳ ಅರ್ಥಗಳಲ್ಲಿರುವ ಮುಖ್ಯವಾದ ಭೇ
ವೇನಂದರೆ, may ಎಂಬದು ಎರಡನೇಯುವರ ಅಪ್ಪಣೆಯನ್ನೂ, can ಎಂಬ
ಸ್ವಂತ ಸಾಮರ್ಥ್ಯವನ್ನೂ ಸೂಚಿಸುತ್ತವೆ. ಹೇಗಂದರೆ—*May* we cro
this field ? ಈ ಹೊಲದೊಳಗಿಂದ ನಾವು ಹೋಗೋಣೇನು ? ಅಂ
ಹೋಗಲಿಕ್ಕೆ ಯಾರದಾದರೂ ಅಡ್ಡಿಯುಂಟೋ? *Can* we cross th
field ? ಈ ಹೊಲದೊಳಗಿಂದ ನಮಗೆ ಹೋಗಲಿಕ್ಕೆ ಬಂದೀತೋ ಅಂದರೆ,
ರೊಳಗಿಂದ ಹಾಯಲಿಕ್ಕೆ ದಾರಿಯುಂಟೋ ?

1) Can ಮತ್ತು not ಎಂಬ ಶಬ್ದಗಳನ್ನು ಯಾವಾಗಲೂ ಕೂಡಿಸಿ ಬರೆಯಬೇ

೬೩. I *may have written* ನಾನು ಬರೆದಿರಬಹುದು. Who *can have written*? ಯಾರು ಬರೆದಿರಬಹುದು? ಅಥವಾ ಯಾರಿಗೆ ಬರೆಯಲಿಕ್ಕೆ ಬಂದಿರಬಹುದು?

೬೪ ಶಬ್ದಸಂಗ್ರಹ ೧೧.

| | | | |
|---|---|---|---|
| To con-tain | ಹಿಡಿಸು, ಒಳಗಿರು, ಒಳಗೊಳ್ಳು. | Re-spect'able<br>Hon'our-able | ಮರ್ಯಾದೆಯುಳ್ಳ, ಸಂಭಾವಿತ, ಸನ್ಮಾನಕ್ಕೆ ಯೋಗ್ಯ, ಆದರಣೀಯ. |
| Con'tra-ry | ವಿರುದ್ಧ. | | |
| Single' | ಒಂದೇ. | Safe'ly | ಸುರಕ್ಷಿತವಾಗಿ, ಕ್ಷೇಮದಿಂದ. |
| Ab-sur'di-ty | ತಿಳಿಗೇಡಿತನದ ಮಾತು, ಅವಿವೇಕದ ಮಾತು. | Numer-ous | ಬಹಳ (ಸಂಖ್ಯಾವಾಚಕ) ಅಸಂಖ್ಯ, ಅಗಣಿತ. |
| Dull | ಮಂದ, ವಿರಸವಾದ, | An er'ror | ತಪ್ಪು. |
| ಒಂದುವೇಳೆ | perhaps. | A cur'tain. | ಪರದೆ. |
| ಇಲ್ಲದಿದ್ದರೆ | if not, oth'er-wise. | ಜಯಹೊಂದಿದ | Vic-to'ri-ous, Suc-cess'ful. |
| ಮಹಸೂಲ | rev'en-ue. | ಸಂಪಾದಿಸು | to ac-quire'. |
| ಏಕೆಂದರೆ | for, because. | ಬೇಗನೆ, ಅವಸರದಿಂದ | hast'ily, in haste. |
| ಮನಸ್ಸಿಗೆ ಬರು ಮೆಚ್ಚು | to ap-prove' of. | ಯಾರಾದರೂ | who-ev'er, |
| | | ಏನಾದರೂ, ಏನೇನು | what-ev'er. |

I am of o-pin'ion that — ನನ್ನ ಅಭಿಪ್ರಾಯವೇನಂದರೆ,

E'ven the hum'blest for'tune — ಅತಿ ಸ್ವಲ್ಪ ಸಂಪತ್ತು ಸಹ, ತೀರಬಡತನವಿದ್ದರೂ.

| | |
|---|---|
| ಅಂಜಿಕೆ ಇಲ್ಲದೆ | fear'less-ly, with-out an'y fear. |
| ನೀನು ಸ್ವತಂತ್ರನಿದ್ದೀ | you are at lib'er-ty. |
| ಒಬ್ಬನದಿರು | to belong' to one. |
| ಕೈಕೊಂಡ ಕೆಲಸ | an under-ta'king. |
| ಜಯ ಹೊಂದು, ಕೈಗೂಡು | to suc-ceed', to get suc-cess. to be suc-cess'ful. |
| ಇಂಥ, ಈ ಪ್ರಕಾರದ | such, of this kind. |

## ಭಾಷಾಂತರ ಪಾಠ ೧೧

೬೫. *May* I take a walk this evening? You *may*, if your work is finished. *May* I read that novel? Yes, you may, for it contains nothing contrary to morality I am of opinion that I *may* safely follow the abvice of a man, who is so respectable. *May* not such accidents happen everyday! Even the humblest fortune *may* grant happines. *May* I take this book again? I think that I *may* follow the advice of such a friend. You *may* play in the garden. With[1] numerous errors a book *may* be very amusing, and without[2] a single absurdity it *may* be very dull. Who *can* tell what to happen to-morrow? A bird *can* fly. The child *cannot* yet walk. He *cannot* learn his lesson. The merchant *can* read and write English, but he *cannot* speak it well. I am going home, *Can* you accompany me? I am sorry I *cannot*: I *may* do so to-morrow. Speak louder; we *cannot* understand what you say. You *cannot* do such a thing without your father's permission.

ಅದು ಹೀಗೆ ಇರಬಹುದು. ಅವನು ನಾಳೆ ಒಂದು ವೇಳೆ[3] ಬರಲಿಕ್ಕಿಲ್ಲ. ನಾನು ಬಂದರೆ ನಾಳೆ ಬಂದೇನು, ಇಲ್ಲದಿದ್ದರೆ ಮುಂದಿನ ಆದಿತ್ಯವಾರ. ನಾವು ನಿನಗೆ ಹೀಗೆ ಹೇಳುತ್ತಿದ್ದೆವು; ಆದರೆ ನೀನು ನಮ್ಮ ಮಾತು ಕೇಳಲಿಲ್ಲ. ಇನ್ನುಮೇಲೆ ಅಂಜಿಕೆ ಇಲ್ಲದೆ ನಿನಗೆ ಬೇಕಾದದ್ದು[4] ಮಾಡಲಿಕ್ಕೆ ನೀನು ಸ್ವತಂತ್ರನಿದ್ದೀ. ನಾವು ಈ ಗಿಡದ[5] ಕೆಲವು ಮಾವಿನ ಹಣ್ಣುಗಳನ್ನು ಕೊಯ್ಯೋಣೇನು? ಬೇಡ, ಯಾಕಂದರೆ ಅವು ನಮ್ಮವಲ್ಲ. ದೇವರು ನಮ್ಮನ್ನು ನೋಡಲಿಕ್ಕಿಲ್ಲವೋ? ನೀನು ಕೈಕೊಂಡ ಕೆಲಸವು ಕೈಗೂಡಿ ಬರಲಿ! ನಿನಗೆ ಜಯವಾಗಲಿ! ನಾವು ಕಲಿಯಬೇಕೆಂದು ಸಾಲೆಗೆ ಹೋಗುತ್ತೇವೆ. ಅವನು ಹೀಗೆ ಅನ್ನಬಾರದೆಂದು ನಾನು ಬೇಗನೆ ಬಂದಿದ್ದೇನೆ. ಜ್ಞಾನ ಸಂಪಾದಿಸಿಕೊಳ್ಳಬೇಕೆಂದು ನಾವು ಕಲಿಯುತ್ತೇವೆ. ನಿನಗೆ ಹೀಗೆ ತೋರಿದರೆ ತೋರಲಿ[6]. ಆದರೆ ಈ ತಪ್ಪು ನಿಜವಾಗಿ ನನ್ನದಲ್ಲ. ನೀವು

1) ಇದ್ದಾಗ್ಯೂ. 2) ಇರದೆ ಇದ್ದಾಗ್ಯೂ. 3) ಒಂದುವೇಳೆ ಎಂಬ ಶಬ್ದದ ಅರ್ಥವು ಬಹುತರವಾಗಿ may ಎಂಬ ಶಬ್ದದಿಂದ ಸೂಚಿತವಾಗುತ್ತದೆ. 4) what you like. 5) From. 6) You may think so, if you like.

ನನ್ನನ್ನು ದೂಷಿಸಬಾರದೆಂದು ನಾನು ಇಷ್ಟು ಅವಸರದಿಂದ ಬಂದಿದ್ದೇನೆ. ಹೀಗೆ ಮಾಡುವವನಿಗೆ ಶಿಕ್ಷೆಯಾಗುವದು. ಒಂದು ವೇಳೆ ಇಂಥ ನಡತೆಯು ಸರಕಾರದವರ ಮನಸ್ಸಿಗೆ ಬರಲಿಕ್ಕಿಲ್ಲ[1]. ಈಗ ನೀನು ನನಗೆ ಹೇಳುವದಕ್ಕಿಂತ ಆ ಹೊತ್ತು ಅವನು ನನಗೆ ಹೆಚ್ಚು ಹೇಳಿದನು. ಧೈರ್ಯವಿರುವವನಿಗೆ ದೈವದ ಸಹಾಯು[2].

## ೬೬ ಶಬ್ದಸಂಗ್ರಹ ೧೨.

| | | | |
|---|---|---|---|
| Since | ಯಾವ ಪಕ್ಷದಿಂದ, ಕಾರಣ–ಆದರಿಂದ. | Val'ue | ಬೆಲೆ, ಯೋಗ್ಯತೆ. |
| Gross | ದೊಡ್ಡ, ಸ್ಥೂಲ. | Spar'ing-ly | ಕೈಕಾದು, ಮಿತಿಯಿಂದ ಅಪರೂಪವಾಗಿ. |
| Con-fer' | ಕೊಡು. | An ac'tion | ಕೃತ್ಯ, ನಡತೆ. |
| A math-e-mat-i'cian | ಗಣಿತ ಬಲ್ಲವ, ಗಣಿತ ತಜ್ಞ. | A plan | ಹಂಚಿಕೆ, ಯುಕ್ತಿ. |
| ಒಕ್ಕು, ಜಡಿ, ತೆನೆ ಬಡಿ | to thrash. | ಸುವಾಚ್ಯ | leg'ible. |
| ಸಹ | too. | ಸೀನು | to sneeze. |
| ಉಳ್ಳೀಗಡ್ಡಿ, ಈರುಳ್ಳಿ | an on'ion. | ಇಬ್ಬರೂ, ಎರಡೂ | both. |

| | |
|---|---|
| A gross mis-take. | ದೊಡ್ಡ ತಪ್ಪು. |
| Tran-si'tion | ಸಂಕ್ರಮಣ, ಸ್ಥಿತ್ಯಂತರ, ಸ್ಥಾನಾಂತರ. |
| To indulge' in | ಯಥೇಚ್ಛವಾಗಿ ಭೋಗಿಸು. |
| To con-fer' hon'ours on (ಅ. upon) a per'son | ಒಬ್ಬನಿಗೆ ಮಾನ (ಪದವಿ, ಬಿರುದು) ಕೊಡು. |
| ಮರುದಿವಸ | the next day. |
| ಮುನ್ನಾದಿವಸ | the day be-fore', on the prece'ding day. |
| ಆವುತಣ ಹೇಳು, ಆಮಂತ್ರಣ ಕೊಡು | to in vite', to give an in-vi-ta-tion to. |
| ಸ್ಪರ್ಶ, ತಿಳಿ | to feel, to per-ceive by touch. |
| ಶಬ್ದ ಮಾಡು, ಅಸ್ಪಷ್ಟವಾಗಿ ನುಡಿ | to ut'ter an in-ar-tic'u-late sound. |

1) Government may not approve of such conduct ಅಥವಾ Such conduct may not be approved of by Government.
2) Fortune favours the brave.

## ಭಾಷಾಂತರಪಾಠ ೧೨.

೬೭ The book *cannot* be bad, since it is written by so clever and pious a man. He *cannot* be a good mathematician, if he can make such gross mistakes. We go to school that we *may* learn Those who despise knowledge, do not know its value. What seems death is only a transition. Whatever is, is right. Whatever she said was believed. A rich man *may* indulge in many things, which a poor man *cannot* Such are my plans, and such are my hopes. Such are their religion, and such, their laws. Princess *may* confer honours, but a man's own actions only *can* make him truly honourable. You *cannot* be honest among thieves. You *cannot* honestly remain in such a society. You may think so if you like, but the truth is very different. I *may* have said so, but I do not remember it now. *Can* he have said so? He *cannot* have said so. His statement *may* be true, though I *can* scarcely believe it.

ಮರುದಿವಸ ನಾವು ಹೊರಗೆ ಹೋಗಲೇ ಇಲ್ಲ. ನೀನು ನನಗೆ ಮುನ್ನಾ ದಿವಸ ಹೀಗೆ ಏಕೆ ಹೇಳಲಿಲ್ಲ? ಈ ವರ್ತಮಾನವು ಸತ್ಯವಾಗಲಿ! ಅವನು ಬರಲಿ, ಬಾರದೆ ಇರಲಿ ನಾನು ಅವನಿಗೆ ಔತಣ ಹೇಳಿದ್ದೇನೆ. ನಾನು ನೋಡಲೂ, ಕೇಳಲೂ, ಸ್ಪರ್ಶ ತಿಳಿಯಲೂ, ರುಚಿ ನೋಡಲೂ, ಮೂಸಿ ನೋಡಲೂ ಬಲ್ಲೆನು. ಉಳಿದ ಪ್ರಾಣಿಗಳಾದರೂ ಇವುಗಳನ್ನು ಮಾಡಬಲ್ಲವು. ನಾನು ಮಾತಾಡಬಲ್ಲೆನು. ಮತ್ತು ನನಗೆ ತೋರಿದ್ದನ್ನು ನಾನು ಶಬ್ದಗಳಿಂದ ಆಡಿ ತೋರಿಸಬಲ್ಲೆನು[1]. ಉಳಿದ ಪ್ರಾಣಿಗಳು ಶಬ್ದ ಮಾಡುತ್ತವೆ, ಆದರೆ ಅವು ಮಾತಾಡಲರಿಯವು. ನಾನು ಆಲೋಚಿಸಬಲ್ಲೆನು. ನನಗೆ ತಿಳಿಯುವಂಥ ಮಾತುಗಳು ಪಶುಗಳಿಗೆ ತಿಳಿಯವು. ನೀವು ಹೊರಗೆ ಹೋಗಿ ಸೀನಬಹುದು. ನರಸಿಂಹಾಚಾರ್ಯರು ಉಳ್ಳೇಗಡ್ಡೆ ತಿಂದಿರಬಹುದೋ? ಒಬ್ಬ ಗೃಹಸ್ಥನಿಗೆ ಚಂದ್ರನಾಥನೆಂಬ ಮಗನೂ, ಸುಭದ್ರೆ ಎಂಬ ಒಬ್ಬ ಮಗಳೂ ಇದ್ದರು; ಅವರಿಬ್ಬರೂ ಕೂಡಿ ಒಂದು ದಿವಸ ಪಡಸಾಲೆಯೊಳಗೆ ಆಡುತ್ತಿದ್ದರು; ಅಲ್ಲಿ ಒಂದು ಕನ್ನಡಿ ಇಟ್ಟಿತ್ತು[2]. ಅದನ್ನು ಅವರು ನೋಡಲಿಲ್ಲ. ನಾನು ಹೆಚ್ಚು ಮಾತಾಡಲಾರೆನು. ನಾವು ಇಂಥ ಸಮಯದಲ್ಲಿ ಹೊರಗೆ ಹೋಗಲಾರೆವು. ಅವನು ಬಹಳ ಹಣ ಖರ್ಚು ಮಾಡಲಾರನು[3]. ನಾಳೆ ಅವರು ತಮ್ಮ ಹೊಲದಲ್ಲಿ ಗೋದಿ ಒಕ್ಕಬಹುದು.

---

1) I can express what I think by means of words 2) Placed. 3) Cannot afford to spend.

# ೯ ನೇ ಪಾಠ.

## ಸಾಮಾನ್ಯಾರ್ಥಕ ಸರ್ವನಾಮಗಳು[1].

## Indefinite Pronouns.

೩೮ ಇಂಗ್ಲೀಷಿನಲ್ಲಿ ಸಾಮಾನ್ಯಾರ್ಥಕ ಸರ್ವನಾಮಗಳು ಅನೇಕ ಉಂಟು. ಅವುಗಳಲ್ಲಿ ಕೆಲವು ಇಲ್ಲಿ ಬರೆದವೆ—each, every; either, neither; many, much, few, little; several, certain, some, all, whole; no, none, any, enough; other, another; one, only, alone.

೩೯ Each, every ಎಂಬ ಸರ್ವನಾಮಗಳ ಅರ್ಥವು ಒಂದೊಂದು, ಒಬ್ಬೊಬ್ಬ, ಪ್ರತಿ ಒಬ್ಬ ಎಂತ ಆಗುತ್ತದೆ; ಆದರೆ each ಎಂಬದನ್ನು ಎರಡು ಇಲ್ಲವೆ ಎರಡಕ್ಕಿಂತ ಹೆಚ್ಚು ವಸ್ತುಗಳಲ್ಲಿ ಪ್ರತಿ ಒಂದನ್ನು ತೋರಿಸುವದಕ್ಕೆ ಉಪಯೋಗಿಸುತ್ತಾರೆ; ಮತ್ತು every ಎಂಬದನ್ನು ಎರಡಕ್ಕಿಂತ ಹೆಚ್ಚು ವಸ್ತುಗಳಲ್ಲಿ ಮಾತ್ರ ಪ್ರತಿ ಒಂದನ್ನು ತೋರಿಸುವದಕ್ಕೆ ಉಪಯೋಗಿಸುವರು. Each ಎಂಬದರ ಮುಂದೆ ನಾಮಪದವು ಒಮ್ಮೊಮ್ಮೆ ಬರುತ್ತದೆ, ಒಮ್ಮೊಮ್ಮೆ ಬರುವದಿಲ್ಲ; ಆದರೆ every ಎಂಬದರ ಮುಂದೆ ಅದು ಯಾವಾಗಲೂ ಬೇಕಾಗುತ್ತದೆ. Every ಎಂಬದರ ಭಾಷಾಂತರವನ್ನು ಒಮ್ಮೊಮ್ಮೆ ಎಲ್ಲ ಎಂತ ಸಹ ಮಾಡಬಹುದು. ಉದಾ —

I saw several horses, but *each* of them had some natural defect ನಾನು ಕೆಲವು ಕುದುರೆಗಳನ್ನು ನೋಡಿದೆನು. ಆದರೆ ಅವುಗಳೊಳಗಿನ ಪ್ರತಿ ಒಂದಕ್ಕೆ ಏನಾದರೂ ಕುಂದು ಇತ್ತು.

*Each* boy must bring his own book ಪ್ರತಿ ಒಬ್ಬ ಹುಡುಗನು ತನ್ನ ಸ್ವಂತ ಪುಸ್ತಕವನ್ನು ತರಲಿಕ್ಕೆ ಬೇಕು.

*Every* man has his own failing ಪ್ರತಿ ಒಬ್ಬ ಮನುಷ್ಯನಲ್ಲಿ ಏನಾದರೂ ಕೊಂಕು ಇರುತ್ತದೆ.

*Every* one of you must do it ನೀವೆಲ್ಲರೂ ಅದನ್ನು ಮಾಡಲೇ ಬೇಕು.

೪೦ Either ೧ ಎರಡರಲ್ಲಿ ಯಾವದಾದರೊಂದು[2] ೨ ಇಬ್ಬರೂ[3] ಎರಡೂ.

Neither ಎರಡರಲ್ಲಿ ಒಂದೂ ಇಲ್ಲ.

1) ಈ ಸಾಮಾನ್ಯಾರ್ಥಕ ಸರ್ವನಾಮಗಳ ಉಪಯೋಗವು ವಿಶೇಷಣಗಳಂತೆ ಸಹ ಆಗುತ್ತದೆ. 2) ಈ ಅರ್ಥವಿರಲಾಗಿ either ಕ್ಕೆ ಬದಲಾಗಿ one or the other ಎಂಬ ಶಬ್ದವನ್ನು ಹಾಕುವ ರೂಢಿಯುಂಟು. 3) ಈ ಅರ್ಥದ ಉಪಯೋಗವು ಈಗ ಬಹಳ ಕಡಿಮೆ.

ಭಾಷಾಂತರಪಾಠ ೧೨.

೬೭ The book *cannot* be bad, since it is written by so clever and pious a man. He *cannot* be a good mathematician, if he can make such gross mistakes. We go to school that we *may* learn Those who despise knowledge, do not know its value. What seems death is only a transition. Whatever is, is right. Whatever she said was believed. A rich man *may* indulge in many things, which a poor man *cannot* Such are my plans, and such are my hopes. Such are their religion, and such, their laws. Princess *may* confer honours, but a man's own actions only *can* make him truly honourable. You *cannot* be honest among thieves. You *cannot* honestly remain in such a society. You may think so if you like, but the truth is very different. I *may* have said so, but I do not remember it now. *Can* he have said so? He *cannot* have said so. His statement *may* be true, though I *can* scarcely believe it.

ಮರುದಿವಸ ನಾವು ಹೊರಗೆ ಹೋಗಲೇ ಇಲ್ಲ. ನೀನು ನನಗೆ ಮುನ್ನಾ ದಿವಸ ಹೀಗೆ ಏಕೆ ಹೇಳಲಿಲ್ಲ? ಈ ವರ್ತಮಾನವು ಸತ್ಯವಾಗಲಿ! ಅವನು ಬರಲಿ, ಬಾರದೆ ಇರಲಿ ನಾನು ಅವನಿಗೆ ಔತಣ ಹೇಳಿದ್ದೇನೆ. ನಾನು ನೋಡಲೂ, ಕೇಳಲೂ, ಸ್ಪರ್ಶ ತಿಳಿಯಲೂ, ರುಚಿ ನೋಡಲೂ, ಮೂಸಿ ನೋಡಲೂ ಬಲ್ಲೆನು. ಉಳಿದ ಪ್ರಾಣಿಗಳಾದರೂ ಇವುಗಳನ್ನು ಮಾಡಬಲ್ಲವು. ನಾನು ಮಾತಾಡಬಲ್ಲೆನು. ಮತ್ತು ನನಗೆ ತೋರಿದ್ದನ್ನು ನಾನು ಶಬ್ದಗಳಿಂದ ಆಡಿ ತೋರಿಸಬಲ್ಲೆನು[1]. ಉಳಿದ ಪ್ರಾಣಿಗಳು ಶಬ್ದ ಮಾಡುತ್ತವೆ, ಆದರೆ ಅವು ಮಾತಾಡಲರಿಯವು. ನಾನು ಆಲೋಚಿಸಬಲ್ಲೆನು. ನನಗೆ ತಿಳಿಯುವಂಥ ಮಾತುಗಳು ಪಶುಗಳಿಗೆ ತಿಳಿಯವು. ನೀವು ಹೊರಗೆ ಹೋಗಿ ಸೀನಬಹುದು. ನರಸಿಂಹಾಚಾರ್ಯರು ಉಳ್ಳೀಗಡ್ಡೆ ತಿಂದಿರಬಹುದೋ? ಒಬ್ಬ ಗೃಹಸ್ಥನಿಗೆ ಚಂದ್ರನಾಥನೆಂಬ ಮಗನೂ, ಸುಭದ್ರ ಎಂಬ ಒಬ್ಬ ಮಗಳೂ ಇದ್ದರು; ಅವರಿಬ್ಬರೂ ಕೂಡಿ ಒಂದು ದಿವಸ ಪಡಸಾಲೆಯೊಳಗೆ ಆಡುತ್ತಿದ್ದರು; ಅಲ್ಲಿ ಒಂದು ಕನ್ನಡಿ ಇಟ್ಟಿತ್ತು[2]. ಅದನ್ನು ಅವರು ನೋಡಲಿಲ್ಲ. ನಾನು ಹೆಚ್ಚು ಮಾತಾಡಲಾರೆನು. ನಾವು ಇಂಥ ಸಮಯದಲ್ಲಿ ಹೊರಗೆ ಹೋಗಲಾರೆವು. ಅವನು ಬಹಳ ಹಣ ಖರ್ಚು ಮಾಡಲಾರನು[3]. ನಾಳೆ ಅವರು ತಮ್ಮ ಹೊಲದಲ್ಲಿ ಗೋದೀ ಒಕ್ಕಬಹುದು.

---

1) I can express what I think by means of words 2) Placed. 3) Cannot afford to spend.

## ೯ ನೇ ಪಾಠ.

### ಸಾಮಾನ್ಯಾರ್ಥಕ ಸರ್ವನಾಮಗಳು[1].

### Indefinite Pronouns.

೬೮ ಇಂಗ್ಲೀಷಿನಲ್ಲಿ ಸಾಮಾನ್ಯಾರ್ಥಕ ಸರ್ವನಾಮಗಳು ಅನೇಕ ಉಂಟು. ಅವುಗಳಲ್ಲಿ ಕೆಲವು ಇಲ್ಲಿ ಬರೆದವೆ—each, every; either, neither; many, much, few, little; several, certain, some, all, whole; no, none, any, enough; other, another; one, only, alone.

೬೯ Each, every ಎಂಬ ಸರ್ವನಾಮಗಳ ಅರ್ಥವು ಒಂದೊಂದು, ಒಬ್ಬೊಬ್ಬ, ಪ್ರತಿ ಒಬ್ಬ ಎಂತ ಆಗುತ್ತದೆ; ಆದರೆ each ಎಂಬದನ್ನು ಎರಡು ಇಲ್ಲವೆ ಎರಡಕ್ಕಿಂತ ಹೆಚ್ಚು ವಸ್ತುಗಳಲ್ಲಿ ಪ್ರತಿ ಒಂದನ್ನು ತೋರಿಸುವದಕ್ಕೆ ಉಪಯೋಗಿಸುತ್ತಾರೆ; ಮತ್ತು every ಎಂಬದನ್ನು ಎರಡಕ್ಕಿಂತ ಹೆಚ್ಚು ವಸ್ತುಗಳಲ್ಲಿ ಮಾತ್ರ ಪ್ರತಿ ಒಂದನ್ನು ತೋರಿಸುವದಕ್ಕೆ ಉಪಯೋಗಿಸುವರು. Each ಎಂಬದರ ಮುಂದೆ ನಾಮಪದವು ಒಮ್ಮೊಮ್ಮೆ ಬರುತ್ತದೆ, ಒಮ್ಮೊಮ್ಮೆ ಬರುವದಿಲ್ಲ; ಆದರೆ every ಎಂಬದರ ಮುಂದೆ ಅದು ಯಾವಾಗಲೂ ಬೇಕಾಗುತ್ತದೆ. Every ಎಂಬದರ ಭಾಷಾಂತರವನ್ನು ಒಮ್ಮೊಮ್ಮೆ ಎಲ್ಲ ಎಂತ ಸಹ ಮಾಡಬಹುದು. ಉದಾ—

I saw several horses, but *each* of them had some natural defect ನಾನು ಕೆಲವು ಕುದುರೆಗಳನ್ನು ನೋಡಿದೆನು. ಆದರೆ ಅವುಗಳೊಳಗಿನ ಪ್ರತಿ ಒಂದಕ್ಕೆ ಏನಾದರೂ ಕುಂದು ಇತ್ತು.

*Each* boy must bring his own book ಪ್ರತಿ ಒಬ್ಬ ಹುಡುಗನು ತನ್ನ ಸ್ವಂತ ಪುಸ್ತಕವನ್ನು ತರಲಿಕ್ಕೆ ಬೇಕು.

*Every* man has his own failing ಪ್ರತಿ ಒಬ್ಬ ಮನುಷ್ಯನಲ್ಲಿ ಏನಾದರೂ ಕೊಂಕು ಇರುತ್ತದೆ.

*Every* one of you must do it ನೀವೆಲ್ಲರೂ ಅದನ್ನು ಮಾಡಲೇ ಬೇಕು.

೭೦ Either ೧ ಎರಡರಲ್ಲಿ ಯಾವದಾದರೊಂದು[2] ೨ ಇಬ್ಬರೂ[3] ಎರಡೂ.

Neither ಎರಡರಲ್ಲಿ ಒಂದೂ ಇಲ್ಲ.

1) ಈ ಸಾಮಾನ್ಯಾರ್ಥಕ ಸರ್ವನಾಮಗಳ ಉಪಯೋಗವು ವಿಶೇಷಣಗಳಂತೆ ಸಹ ಆಗುತ್ತದೆ. 2) ಈ ಅರ್ಥವಿರಲಾಗಿ either ಕ್ಕೆ ಬದಲಾಗಿ one or the other ಎಂಬ ಶಬ್ದವನ್ನು ಹಾಕುವ ರೂಢಿಯುಂಟು. 3) ಈ ಅರ್ಥದ ಉಪಯೋಗವು ಈಗ ಬಹಳ ಕಡಿಮೆ.

ಇವೆರಡೂ ಶಬ್ದಗಳ ಮುಂದೆ ನಾಮಪದವು ಒಮ್ಮೊಮ್ಮೆ ಬರುತ್ತದೆ, ಒಮ್ಮೊಮ್ಮೆ ಬರುವದಿಲ್ಲ.

I cannot acquit you of *either* of these charges ಇವೆರಡರಲ್ಲಿ ಯಾವುದೇ ಒಂದು ದೋಷಾರೋಪದಿಂದ ನಾನು ನಿನ್ನನ್ನು ಮುಕ್ತ ಮಾಡಲಾರೆನು.

There were mango trees on *either bank* of the river ನದಿಯ ಎರಡೂ ದಂಡೆಗಳ ಮೇಲೆ ಮಾವಿನ ಗಿಡಗಳಿದ್ದವು.

*Neither* of us spoke ನಮ್ಮಿಬ್ಬರಲ್ಲಿ ಒಬ್ಬನೂ ಮಾತಾಡಲಿಲ್ಲ.

೭೧ Many, Much ಎಂಬವುಗಳ ಅರ್ಥವು ಬಹಳ ಎಂತ ಆಗುತ್ತದೆ. ಆದರೆ many ಎಂಬದು ಸಂಖ್ಯೆಯನ್ನೂ, much ಎಂಬದು ಪರಿಮಾಣವನ್ನೂ ತೋರಿಸುತ್ತವೆ. ಉದಾ—

*Many* men ಬಹಳ ಜನರು.
*Much* money ಬಹಳ ಹಣ.

ಸಂಖ್ಯಾರ್ಥದಲ್ಲಿ { Very many / A great many, / A good many, } ಬಹಳ, ಎಷ್ಟೋ, ಅನೇಕ.

ಪರಿಮಾಣಾರ್ಥದಲ್ಲಿ { A great deal of / A good deal of } ಬಹಳ.

A *great many* men think so ಬಹಳ ಜನರು ಹೀಗೆ ತಿಳಿಯುತ್ತಾರೆ.

A *great deal of* money ಬಹಳ ಹಣ.

ಒಮ್ಮೊಮ್ಮೆ many ಎಂಬದರ ಮುಂದಿನ ನಾಮಪದವನ್ನು ಬಿಟ್ಟು ಬಿಡುತ್ತಾರೆ. ಉದಾ—

It is supposed by *many* that etc ಅನೇಕ ಜನರು ತಿಳಿಯುವದೇನಂದರೆ.

More, most ಎಂಬ ಶಬ್ದಗಳ ಮುಂದಿನ ನಾಮಪದವನ್ನು ಒಮ್ಮೊಮ್ಮೆ ಬಿಟ್ಟುಬಿಡುತ್ತಾರೆ. ಉದಾ—

Tell me *more* ನನಗೆ ಇನ್ನೂ ಹೇಳು,

*Most* of my readers ನನ್ನ (ಪುಸ್ತಕ) ಓದುವವರನೇಕರು.

One more ಮತ್ತೊಂದು. What more? ಏನು ಹೆಚ್ಚಿಗೆ.

One word more ಇನ್ನೊಂದು ಶಬ್ದ. { How many more? / How much more? } ಇನ್ನೂ ಎಷ್ಟು?

೭೨ Few ತೀರ, ತುಸು, Little ತೀರ ಸ್ವಲ್ಪ, Few ಎಂಬದು ಸಂಖ್ಯೆಯನ್ನೂ little ಎಂಬದು ಪರಿಮಾಣವನ್ನೂ ಸೂಚಿಸುತ್ತವೆ; ಇವುಗಳ ಹಿಂದೆ a ಎಂಬ ಉಪಪದವನ್ನಿಟ್ಟರೆ, ಇವುಗಳ ಅರ್ಥವು ಬೇರೆಯಾಗುತ್ತದೆ. ಉದಾ—

A few ತುಸು, ಕೆಲವು. Few ತೀರ ತುಸು, (ಬಹುತರ ಇಲ್ಲವೇ ಇಲ್ಲ).

A little ಸ್ವಲ್ಪ, ತುಸು. Little ತೀರ ಸ್ವಲ್ಪ, (ಬಹುತರ ಇಲ್ಲವೇ ಇಲ್ಲ).

There are a *few* men who can do so ಹೀಗೆ ಮಾಡಬಲ್ಲ ಜನರು ಕೆಲವರಿದ್ದಾರೆ.

There are *few* men who can do so ಹೀಗೆ ಮಾಡಬಲ್ಲ ಜನರು ತೀರ ತುಸು.

Put a little milk into this cup ಈ ಬಟ್ಟಲೊಳಗೆ ಸ್ವಲ್ಪ ಹಾಲು ಹಾಕು.

There is *little* chance of his recovery ಅವನು ವಾಸಿಯಾಗುವ ಸಂಭವವು ತೀರ ಸ್ವಲ್ಪ (ಇಲ್ಲೆಂದರೂ ನಡೆದೀತು).

## ೭೩ ಶಬ್ದಸಂಗ್ರಹ ೧೩.

| | | | |
|---|---|---|---|
| An a-muse'-ment | ಆಟ, ವಿನೋದ, ತಮಾಷೆ, ಮನರಂಜನೆ. | A cap'tive | (ಯುದ್ಧದಲ್ಲಿ ಹಿಡತಂದ) ಕೈದಿ, ಸೆರೆಯಾಳು. |
| To in-ter-rupt' | ಅಡ್ಡಬರು, ಅಡ್ಡೀಮಾಡು, ನಡುವೆ ನಿಲ್ಲಿಸು. | Dis-posed' | ಮನಸ್ಸು ಒಲಿದ, ಪ್ರವೃತ್ತವಾದ. |
| A sob | ಬಿಕ್ಕು. | Mis-ap-pre-hen'sion | ತಪ್ಪು ತಿಳುವಳಿಕೆ, ವಿಪರೀತ ಗ್ರಹಿಕೆ. |
| A quality | ಗುಣ. | | |
| A ti'tle | ಬಿರುದು, ಕಿತಾಬು, ಹಕ್ಕು. | A crea'ture | ಪ್ರಾಣಿ. |
| Hand'some-ly | ೧ ಉದಾರವಾಗಿ, ೨ ಬಹಳ ಚಂದವಾಗಿ. | Pos'i-tive-ly | ಖಂಡಿತವಾಗಿ, ನಿಶ್ಚಯವಾಗಿ. |
| To pause | (ಮಾತಾಡುವಾಗ ಸ್ವಲ್ಪ ಹೊತ್ತು) ನಿಲ್ಲು. | Dis-taste'ful | ಅಸಹ್ಯವಾದ, ರುಚಿ ಇಲ್ಲದ. |
| An e-con'o-mist | ಮಿತಿಯಿಂದ ಖರ್ಚು ಮಾಡುವವ, ಅರ್ಥಶಾಸ್ತ್ರಜ್ಞ. | For'tune | ಸಂಪತ್ತು. |
| ನಿಯಮ, ಕಟ್ಟಳೆ. | a rule. | A mea'dow | ಹುಲ್ಲುಗಾವಲು. |
| ದುಃಖಕರ | Sad. | ತೋರಿಸು | to point out. |
| ನ್ಯೂನತೆ, ವ್ಯಂಗ, ಕೊಂಕು, ಕುಂದು | a fai-'ling, a defect'. | ಚಟ, ಅಭ್ಯಾಸ | a hab'it. |
| | | ಸಿಡುಕಿನ | Cross, peev'ish. |
| ಶೀಘ್ರಕೋಪಿ, ಸಂಗ ಡಲೇ ಸಿಟ್ಟಿಗೇಳುವ | ir'ri-table. | ಚಾತುರ್ಯ, ಕೌಶಲ್ಯ | Skill. |

| | |
|---|---|
| Ever-y moment | ಕ್ಷಣಕ್ಷಣಕ್ಕೆ, ಪ್ರತಿ ನಿಮಿಷಿಗೆ. |
| To de-serve', to be wor'thy of | ಯೋಗ್ಯವಾಗು, ಪಾತ್ರ ಇರು, ಲಾಯಖ ಆಗಿರು |
| Still few'er | ಅದಕ್ಕೂ ಕಡಿಮೆ, |
| To be well (or, ill) disposed' to (or tow'ards) one | ಒಬ್ಬರ ವಿಷಯಕ್ಕೆ ಮನಸ್ಸು ಚಲೋದು [ ಅಥವಾ ಕೆಟ್ಟದು ] ಇರು. |
| ಗೊತ್ತಿರು | to know, to be a-ware' of. |
| ತಿಳಿಯು, ಗೊತ್ತಾಗು | to come to know, to learn. |
| ತಿಳಿಸು, ಸುದ್ದೀ ಹೇಳು, ಹೇಳು | to in-form' (a man of), to make (a man) a-ware' (of), to com-mu'-nicate (a thing to a man). |
| (ಒಬ್ಬ ಮನುಷ್ಯನು) ತಿಳಿಸಲ್ಪಡು, ಹೇಳಲ್ಪಡು | to be informed' (of), to be made a-ware' (of), to be told. |
| (ಒಂದು ಮಾತು, ಹೇಳಲ್ಪಡು | to be told. |
| ಇಷ್ಟು ಸಾರೆ,-ಬಾರಿ | so of'ten. |
| ಒಬ್ಬ- ಮೇಲೆ ಸಿಟ್ಟಾಗು | to be ( to become or-to grow ) an'gry with a per'son. |
| (ಯಾವದೊಂದು ಮಾತಿಗೆ) ಸಿಟ್ಟಾಗು | to be an'gry at a thing. |
| ಏಕಾಂತದಲ್ಲಿ | In pri'vate, in secret, pri'vately, sec'ret-ly. |
| ಕುಂದು, ಗೋಮು, ವ್ಯಂಗ | a natural defect'. |
| ನಾನು ನಿನಗೆ ಮೊದಲೆ ಹೇಳಿಬಿಟ್ಟದ್ದೇನೆ | I have told you al-ready'. |

## ಭಾಷಾಂತರಪಾಠ ೧೩.

೭೪ He spent[1] *many* hours *each* day in this amusement. The prayers of the priest and the people were *every* moment interrputed by sobs. He has *every* great and generous quality. *Few* of you deserve that title. *Each* of you will be handsomely rewarded. He will take *neither* side. *Few* men have complained of this evil. He paused *a few* minutes. *Very few* people are good economists of their fortune, and still *fewer* of their time. He has brought *many* captives to Poona. Very *many* people were well

1) ಕಳೆದನು.

disposed towards their rulers. On this subject there is, we think, *much* misapprehension. There was *much* grass in the meadow You must write twelve *more* exercises. There were a *few more* poor creatures. I can tell you *many more* stories. What *more* do you want? I have written some letters, but I have to write two *more*. The subject was positively distasteful to *most* readers.

ವರ್ಗದೊಳಗಿನ ಪ್ರತಿ ಒಬ್ಬ ವಿದ್ಯಾರ್ಥಿಯ ಬಳಿಯಲ್ಲಿ ಅವನ ಸ್ವಂತ ಪುಸ್ತಕ ವಿರತಕ್ಕದ್ದು. ನಿಮ್ಮಲ್ಲಿ ಪ್ರತಿ ಒಬ್ಬನಿಗೆ ಈ ನಿಯಮವು ಗೊತ್ತಿರಲಿಕ್ಕೆ ಬೇಕು. ನನಗೆ ಈ ನಿಯಮಗಳನ್ನು ತಿಳಿಸಿ ಹೇಳಲಿಲ್ಲ. ಅವರಿಬ್ಬರೊಳಗೆ ಒಬ್ಬನಿಗೂ ಈ ನಿಯಮವನ್ನು ತಿಳಿಸಿ ಹೇಳಲಿಲ್ಲ. ಈ ಮಾತು ನೀನು ನನಗೆ ಕೂಡಲೇ ಯಾಕೆ ತಿಳಿಸಲಿಲ್ಲ ? ಈ ದುಃಖದ ಸುದ್ದಿಯನ್ನು ನಾನು ಅವನಿಗೆ ತಿಳಿಸಲಾರೆನು. ಯಾರಿಗಾದರೂ ಅವನ ನ್ಯೂನತೆಗಳನ್ನು ತಿಳಿಸುವದು ಒಳ್ಳೇದು; ಆದರೆ ಅವರು ಸಂಗಡಲೇ ಸಿಟ್ಟಿಗೇಳುವವರಾಗಿರಬಾರದು. ನನ್ನ ನ್ಯೂನತೆಗಳನ್ನು ನನಗೆ ತೋರಿಸಿ ಕೊಡು. ಪ್ರತಿ ಒಬ್ಬ ಮನುಷ್ಯನು ಯಾವದಾದರೊಂದು ಕಲೆಯಲ್ಲಿ ನಿಪುಣನಾಗಲಿಕ್ಕೆ ಯತ್ನಿಸತಕ್ಕದ್ದು. ನಾನು ಅವನ ತಪ್ಪು ಅವನಿಗೆ ತೋರಿಸಿಕೊಟ್ಟೆನು; ಮತ್ತು ಹಾಗೆ ಅನೇಕ ಸಾರೆ ಮಾಡಿದ್ದರಿಂದ ಅವನು ಕಟ್ಟಕಡೆಗೆ ಸಿಟ್ಟಿಗೆದ್ದನು. ಎರಡನೇಯವರು ಏಕಾಂತದಲ್ಲಿ ಮಾತಾಡುವದನ್ನು ಕೇಳುವದು ಬಹಳ ಕೆಟ್ಟ ನಡತೆ. ವೈದ್ಯನ ಮನೆಗೆ ಹೋಗುವ ದಾರಿಯನ್ನು ಅವನಿಗೆ ತೋರಿಸು. ಈ ಕುದುರೆಯ ಬಲಗಣ್ಣಿನಲ್ಲಿ ಏನೋ ಕುಂದು ಉಂಟು. ನನ್ನ ಕುದುರೆಯ (ಎರಡರೊಳಗಿನ) ಒಂದು ಕಣ್ಣಿನಲ್ಲಿ ಸಹ ಕುಂದು ಇಲ್ಲ. ನೀನು ನನ್ನ ಮೇಲೆ ಯಾಕೆ ಸಿಟ್ಟಾಗಬೇಕೆಂಬದು ನನಗೆ ತಿಳಿಯದು. ಸಿಟ್ಟೆಂಬದು ಒಂದು ಮನೋವಿಕಾರವು. ಎಷ್ಟೋ ಜನರು ಸಿಟ್ಟಿನವರಿರುತ್ತಾರೆ, ಅವರು ಸಂಗಡಲೇ ಸಿಟ್ಟಿಗೇಳುತ್ತಾರೆ[1]. ಅವರು ಏನೂ ಕಾರಣವಿಲ್ಲದೆ ಸಿಟ್ಟಿಗೇಳುತ್ತಾರೆ ನೀನು ಸಿಡುಕಿನವರ ಸಂಗತಿ ಹಿಡಿಯಬೇಡ. ನಿನಗೆ ಬೇಕಾದದ್ದು ನಾನು ಮೊದಲೇ ಕೊಟ್ಟುಬಿಟ್ಟಿದ್ದೇನೆ. ನಿನಗೆ ಈಗ ಮತ್ತೇನು ಬೇಕು ? ಈ ಕೆಲಸದಲ್ಲಿ ಹೆಚ್ಚು ಕೌಶಲ್ಯವಿರತಕ್ಕದ್ದು. ಈ ಮಾತು ನಾನು ಅವನಿಗೆ ಮೊದಲೇ ತಿಳಿಸಿಬಿಟ್ಟಿದ್ದೇನೆ. ಇದು ನಿನಗೆ ಹೇಗೆ ತಿಳಿಯಿತು ? ನನಗೆ ಇದು ನಿನ್ನೆ ಗೋವಿಂದನ ಮನೆಯಲ್ಲಿ ತಿಳಿಯಿತು. ಈ ಮಾತು ನಿಮಗೆ ಗೊತ್ತಿದ್ದಿಲ್ಲವೆಂದು ನನಗೆ ತೋರುತ್ತದೆ.

---

1) They easily get angry.

## ೭೫ ಶಬ್ದಸಂಗ್ರಹ ೧೪

| | | | |
|---|---|---|---|
| For'tu-nately | ದೈವಯೋಗದಿಂದ. | A grape | ದ್ರಾಕ್ಷೆ. |
| To clean | ಹಸನ ಮಾಡು, ಸ್ವಚ್ಛ ಮಾಡು. | A po'et | ಕವಿ |
| A sing'ing-bird | ಹಾಡುವ ಪಕ್ಷಿ. | O'ral-ly | ಬಾಯಿಂದ, ತೋಂಡಿ. |
| Con-sump'tive | ಕ್ಷಯರೋಗವುಳ್ಳ. | Wil'ling | ಮನಸ್ಸುಳ್ಳ, ಇಚ್ಛೆಯುಳ್ಳ, ಸಮ್ಮತಿಯುಳ್ಳ |
| A pane | ಕನ್ನಡಿ, ಹರಳು, ಗಾಜಿನ ಫಲಕ. | Im-pu'nity | ಶಿಕ್ಷೆಯಿಲ್ಲದೆ ಇರೋಣ, ತಪ್ಪೋಣ, ನಿರ್ಭಯತೆ. |
| Di-verse' Di vərge-nt | ಬಗೆಬಗೆಯ, ತರತರದ. | Sun'dry | ನಾನಾವಿಧ, ಬಗೆಬಗೆಯ, ಅನೇಕ. |

Stairs, a stair'case, a flight of stairs ಜಿನ್ನೆ, ಸೋಪಾನ, ಮೆಟ್ಟು.
Be-low'stairs, down'stairs ಸೋಪಾನದ ಕೆಳಗೆ, ಕೆಳಗಿನ ಅಂತಸ್ತಿನಲ್ಲಿ.
Up-stairs ಮಾಳಿಗೆಯ ಮೇಲೆ, ಮೇಲಿನ ಅಂತಸ್ತಿನಲ್ಲಿ.

| | |
|---|---|
| ಕೊರತೆ ಇರು, ಬೇಕಾಗಿರು | to want, to be in want of, to be in-need of. |
| ಸಂಭವಿಸಿದ್ದೇನಂದರೆ | it hap-pened that, it so hap-pened that. |
| ಶ್ರೀಮಂತ ಇಲ್ಲವೆ ಬಡವನಾಗು | grow(or' to become,) rich or poor. |
| ಕೆಲವು ಅಂಶದಿಂದ, ಅಂಶತಃ | in some respects. |
| ಬಹಳ ಅಂಶದಿಂದ, ಬಹುತರ | in most respects. |
| ಅವಲಂಬಿಸಿರು, ನಂಬು, ಭಾರಹಾಕು | to depend' up-on. |
| ಒಳ್ಳೇ ಕುಶಲತೆ, ಬಹಳ ಕೌಶಲ್ಯ | con-sid'erable skill. |
| ಜುವ್ ಹಿಡಿ, ಸುಂದಾಗು ಮರಗುಗಟ್ಟು | to be numbed. |

## ಭಾಷಾಂತರಪಾಠ ೧೪

೭೬ *A few* days ago I fell downstairs, but fortunately did not hurt myself[1]. He has still *a few* friends that can assist him. Will you bring me a *little* water to wash this inkstand? We have *many* trees in our garden, but there is not *much* fruit[2] on them: Are there *many* birds in this part of the country? There are *great many*. but *very few* are singing-birds. Here is a *great deal* of water. They have two children and both of them seem consumptive. *Each* of those boys has a new dress on. *Every* pupil learnt his lesson well. There is a broken pane in *every* window in the

1) ನನಗೆ ಏನೂ ನೋವು ಆಗಲಿಲ್ಲ. 2) ಬಹಳ ಹಣ್ಣುಗಳು.

room. He is one of the *few* children, whom I am very fond of. He offered me *some* grapes and guavas; but I did not like *either*. Rama and Govinda will be examined orally[1] in the High School tomorrow, but I do not think that *either* of them will pass. *Some* men do not write a legible hand.

ಅವನಿಗೆ ಬಹಳ ಸ್ವಲ್ಪ ಗೊತ್ತಿತ್ತು. ನಿನಗೆ ಮತ್ತೇನು ಬೇಕಾಗಿತ್ತು? ನನಗೆ ಇನ್ನೂ ಬಹಳ ಹಣ ಬೇಕಾಗಿತ್ತು. ನಾನು ನಿನಗೆ ಮತ್ತೊಂದು ಮಾತು ಹೇಳುವದಿತ್ತು; ಆದರೆ ಅದಕ್ಕೆ ನನಗೆ ಹೊತ್ತು ಇದ್ದಿಲ್ಲ. ಇನ್ನೂ ಎಷ್ಟು ಮಂದಿ ಅತಿಥಿಗಳು ಬರತಕ್ಕವರಿದ್ದಾರೆ? ಇನ್ನೂ ಎಷ್ಟು ಸಕ್ಕರೆ ಕೊಳ್ಳತಕ್ಕದ್ದದೆ? ಎಷ್ಟೋ ಜನರ ಅಭಿಪ್ರಾಯವು ಹೀಗೆ ಅದೆ. ಇಲ್ಲಿ ಎಲ್ಲ ತರದ ಕಾಗದಗಳುಂಟು ಇದನ್ನು ತೆಗೆದುಕೋ, ಇಲ್ಲವೆ ಅದನ್ನು ತೆಗೆದುಕೋ. ಬಹಳ ಮಂದಿಯ ಮನಸ್ಸಿಗೆ ಇದು ಬರಲಿಲ್ಲ. ಹೆಚ್ಚು ಜನರು ಬರತಕ್ಕವರಿದ್ದಾರೆ. ನಾನು ಸ್ವಲ್ಪ ಕೇಳಿದೆನು, ಆದರೆ ನನಗೆ ಹೆಚ್ಚಿಗೆ ಹೇಳು. ಬಹಳ ಜನರು ಬರಲಿಕ್ಕಿಲ್ಲ. ನಿನಗೆ ಸಹಾಯ ಮಾಡುವ ಮನಸ್ಸುಳ್ಳವರು ತೀರ ಸ್ವಲ್ಪ ಜನರು ಇರಬಹುದು. ಕೆಲವು ಜನರು ಅಲ್ಲಿ ಇದ್ದರು, ಆದರೆ ಅವರು ಬಹಳ ಮಂದಿ ಇದ್ದಿಲ್ಲ. ಹೆಚ್ಚು ಜನರು ಬರುತ್ತಿದ್ದರು, ಮತ್ತು ಇನ್ನೂ ಅನೇಕ ಮಂದಿ ಬರತಕ್ಕವರಿದ್ದರು. ನಾನು ನಿಮಗೆ ಬಹಳ ಹೇಳತಕ್ಕವನಿದ್ದಿಲ್ಲ[2]. ಇನ್ನೂ ಬಹಳ ಜನರು ಬರತಕ್ಕವರಿದ್ದರು; ಆದರೆ ಅವರು ಇನ್ನೂವರೆಗೆ ಯಾಕೆ ಬರಲಿಲ್ಲೆಂಬದು ನನಗೆ ತಿಳಿಯದು. ಅದದ್ದೇನಂದರೆ—ಅವೇ ಹುಡುಗರನ್ನು ಅದೇ ಸ್ಥಳದಲ್ಲಿ ಅದೇ ಮನುಷ್ಯನು ಪುನಃ ಕಂಡನು. ಶ್ರೀಮಂತರಾಗುವದಾಗಲಿ, ಬಡವರಾಗುವದಾಗಲಿ ಬಹುತರ ತಮ್ಮ ಕೈಯೊಳಗೆ ಇರುತ್ತದೆ. ಹಿಂದೂ ಜನರು ಬಹುತರವಾಗಿ ದೈವದ ಮೇಲೆ ಭಾರ ಹಾಕುತ್ತಾರೆ; ಆದರೆ ಪ್ರತಿಯೊಬ್ಬನ ದೈವವು ಬಹುತರ ಅವನ ಕೈಯೊಳಗೆ ಇರುತ್ತದೆ. ನಾನು ಇದನ್ನು ಅವನಿಗೆ ತಿಳಿಸಬಾರದೆಂದು ನೀನು ನನಗೆ ಹೇಳುತ್ತೀ. ಆದರೆ ನಾನು ಅದನ್ನು ಅವನಿಗೆ ಈ ಮೊದಲೇ ತಿಳಿಸಿಬಿಟ್ಟದ್ದೇನೆ. ಇಂಥ ಕೆಲಸ ಮಾಡುವದಕ್ಕೆ ಬಹಳ ಕೌಶಲ್ಯಬೇಕು. ಚಳಿಯಿಂದ ಅವನ ಕೈಕಾಲು ಮರಗುಗಟ್ಟಿವೆ.

---

1) ಬಾಯ ಪರೀಕ್ಷೆಯಾಗುವದು. 2) I was not going to tell you much, I did not mean ( or, intend ) to tell you much.

# ೧೦ ನೇ ಪಾಠ.

## ಸಾಮಾನ್ಯಾರ್ಥಕ ಸರ್ವನಾಮಗಳು (ಮುಂದೆ ಸಾಗಿದ್ದು).

## Indefinite pronouns (Continued).

೭೭ Several ಕೆಲವು, ಅನೇಕ, ಬೇರೆ ಬೇರೆ. ಇದರ ಮುಂದೆ ನಾಮ ಪದವು ಯಾವಾಗಲೂ ಬರುತ್ತದೆ ಉದಾ—

I saw *several* boys in the street — ನಾನು ಓಣಿಯಲ್ಲಿ ಅನೇಕ ಹುಡುಗರನ್ನು ಕಂಡೆನು.

I saw *several* kinds of mangoes — ನಾನು ತರತರದ ಮಾವಿನ ಹಣ್ಣುಗಳನ್ನು ಕಂಡೆನು.

೭೮ Several[1] ಎಂಬದರ ಮುಂದೆ ನಾಮಪದವು ಯಾವಾಗಲೂ ಬರುತ್ತದೆ. ಆ ನಾಮಪದವು ಏಕವಚನದಲ್ಲಿದ್ದರೆ, certain ಅಂದರೆ ಒಬ್ಬಾನೊಬ್ಬ, ಕೆಲವೊಂದು ಎಂತಲೂ ಬಹುವಚನದಲ್ಲಿದ್ದರೆ, ( ನಿಯಮಿತ ) ಕೆಲವು ಎಂತಲೂ ಅರ್ಥವಾಗುತ್ತದೆ. ಉದಾ—

There was a *certain* husbandman — ಒಬ್ಬಾನೊಬ್ಬ ಒಕ್ಕಲಿಗನಿದ್ದನು.

He has left here *certain* papers for you — ಅವನು ನಿಮ್ಮ ಸಲುವಾಗಿ ಇಲ್ಲಿ ಕೆಲವು ಕಾಗದಗಳನ್ನು ಇಟ್ಟು ಹೋಗಿದ್ದಾನೆ.

Certain[2] ಎಂಬದು ಒಮ್ಮೊಮ್ಮೆ ಶುದ್ಧ ವಿಶೇಷಣವಿರುತ್ತದೆ; ಆಗ ಅದರ ಅರ್ಥವು ನಿಶ್ಚಯವಾದ ಎಂದು ಆಗುತ್ತದೆ. ಉದಾ—

This is *certain* — ಇದು ನಿಶ್ಚಯವಾದದ್ದು.

೭೯ ಏಕವಚನ ನಾಮಪದಕ್ಕೆ ಸಂಬಂಧಿಸಿರಲು, some ಎಂಬದರ ಅರ್ಥಗಳು ಯಾವನೋ ಒಬ್ಬ, ಸ್ವಲ್ಪ ಎಂತ ಆಗುತ್ತದೆ. ಈ ಶಬ್ದವು ಸಂಖ್ಯೆ, ಪರಿಮಾಣಗಳನ್ನೆರಡೂ ತೋರಿಸುತ್ತದೆ. ಉದಾ—

She is the wife of *some* sailor — ಆಕೆ ಯಾವನೋ ಒಬ್ಬ ನಾವಿಕನ ಹೆಂಡತಿ.

He stood at *some* distance — ಅವನು ಸ್ವಲ್ಪ ದೂರ ನಿಂತನು.

It occurred in *some* such way — ಅದು ಇಂಥ ಯಾವದೋ ಒಂದು ತೆರನಾಗಿ ಸಂಭವಿಸಿತು.

1) ಈ ಶಬ್ದದ ಮೂಲ ಅರ್ಥವು ಬೇರೆ ಬೇರೆ, ಭಿನ್ನ ಭಿನ್ನ ಎಂಬದು. 2) ಇದರಿಂದ certainly 'ನಿಶ್ಚಯವಾಗಿ' ಎಂಬ ಕ್ರಿಯಾವಿಶೇಷಣವಾಗುತ್ತದೆ.

ಬಹುವಚನ ನಾಮಪದಕ್ಕೆ ಸಂಬಂಧಿಸಿರಲು, some ಎಂಬದರ ಅರ್ಥವು ಕೆಲವರು, ಕೆಲವು ಎಂತ ಆಗುತ್ತದೆ. ಉದಾ—

*Some* men ಕೆಲವು ಜನರು.

ಸಂಖ್ಯಾವಾಚಕ ವಿಶೇಷಣಕ್ಕೆ ಸಂಬಂಧಿಸಿರಲಾಗಿ, some ಎಂಬದರ ಅರ್ಥವು, ಸುಮಾರು, ಹೆಚ್ಚು ಕಡಿಮೆ ಎಂತ ಆಗುತ್ತದೆ. ಉದಾ—

*Some* fifty years ago ಸುಮಾರು ಐವತ್ತು ವರ್ಷಗಳ ಮುಂಚೆ.

ಒಮ್ಮೊಮ್ಮೆ some ಎಂಬದರ ಮುಂದಿನ ನಾಮಪದವು ಲೋಪವಾಗುತ್ತದೆ. ಉದಾ—

*Some* say that he is in Poona ಅವನು ಪುಣೆಯಲ್ಲಿರುತ್ತಾನೆಂದು ಕೆಲವರು ಹೇಳುತ್ತಾರೆ.

*Some* of the paper in this bundle is thin ಈ ಗಂಟಿನೊಳಗಿನ ಕೆಲವು ಕಾಗದಗಳು ತೆಳುವು ಅವೆ.

೮೦ ಏಕವಚನ ನಾಮಪದದ ಹಿಂದೆ all = ಇಡೀ, ಯಾವತ್ತು, ಎಲ್ಲ. ಉದಾ—

*All* Bombay knows this ಮುಂಬಯಿ ಪಟ್ಟಣಕ್ಕೆಲ್ಲ ಈ ಮಾತು ಗೊತ್ತದೆ.

I have sat here *all* day ಇಡೀ ದಿವಸ ನಾನು ಇಲ್ಲಿ ಕೂತಿದ್ದೇನೆ.

In Thee *all* passion becomes passionless ನಿನ್ನಲ್ಲಿ ಎಲ್ಲ ಮನೋವಿಕಾರಗಳು ನಿರ್ವಿಕಾರವಾಗುತ್ತವೆ.

ಬಹುವಚನ ನಾಮದ ಹಿಂದೆ all ದ ಅರ್ಥ ಎಲ್ಲ. ಉದಾ—

Lakshmi is jealous as *all* women are ಲಕ್ಷ್ಮಿಯು ಎಲ್ಲ ಸ್ತ್ರೀಯರಂತೆ ಪ್ರೇಮ ಸಂಶಯವುಳ್ಳವಳಿದ್ದಾಳೆ.

All ಎಂಬ ಶಬ್ದವು ಸಂಬಂಧಿಸಿರುವ ನಾಮಪದಕ್ಕೆ the ಎಂಬ ಉಪಪದವಾಗಲಿ, ಒಂದು ವಿಶೇಷಣವಾಗಲಿ ಹತ್ತುತ್ತಿದ್ದರೆ, all ಎಂಬ ಶಬ್ದವು ಮೊದಲು ಬರುತ್ತದೆ. ಉದಾ—

The sovereignty of *all the* world ಸಕಲ ಭೂಮಂಡಲದ ಆಧಿಪತ್ಯವು.
*All this letter* ಈ ಪೂರಾ ಪತ್ರ.
*All the men* (ಆ) ಜನರೆಲ್ಲರು.

ಒಮ್ಮೊಮ್ಮೆ all ಎಂಬ ಶಬ್ದವು ಕ್ರಿಯಾಪದದ ಮುಂದೆ ಒರುತ್ತದೆ; ಮತ್ತು ವಾಕ್ಯದಲ್ಲಿ ಸಹಾಯ ಕ್ರಿಯಾಪದವಿದ್ದಾಗ all ಎಂಬದನ್ನು ಆ ಸಹಾಯ ಕ್ರಿಯಾ ಪದಕ್ಕೂ ಮುಖ್ಯ ಕ್ರಿಯಾಪದಕ್ಕೂ ನಡುವೆ ಹಾಕಬೇಕಾಗುತ್ತದೆ. ಉದಾ—

The world is *all* before us ಸಂಪೂರ್ಣ ಜಗತ್ತು ನಮ್ಮ ಮುಂದೆ ಉಂಟು.
The guests stood *all* aside ಯಾವತ್ತು ಅತಿಥಿಗಳು ಒತ್ತಟ್ಟಿಗೆ ನಿಂತುಕೊಂಡರು.
Thr tigers were *all* killed ಯಾವತ್ತು ಹುಲಿಗಳು ಕೊಲ್ಲಲ್ಪಟ್ಟವು; ಅಥವಾ ಯಾವತ್ತು ಹುಲಿಗಳನ್ನು ಕೊಂದರು.

ಒಮ್ಮೊಮ್ಮೆ all ಎಂಬ ಶಬ್ದದ ಮುಂದಿನ ನಾಮಪದವು ಗುಪ್ತವಿರುತ್ತದೆ.

ಉದಾ—
Death is certain to *all*, *all* must die ಸಾವು ಎಲ್ಲರಿಗೆ ನಿಶ್ಚಯವಾಗಿ ಬರತಕ್ಕದ್ದು, ಎಲ್ಲರೂ ಸಾಯಲಿಕ್ಕೇ ಬೇಕು.
This is not *all* ಇಷ್ಟೇ ಅಲ್ಲ.

ಸರ್ವನಾಮವು to be ಎಂಬ ಕ್ರಿಯಾಪದಕ್ಕೆ ಕರ್ತೃಪದವಿದ್ದರೆ all ಎಂಬ ಶಬ್ದವು ಕ್ರಿಯಾಪದದ ಮುಂದೆ ಬರುತ್ತದೆ. ಉದಾ —

They are *all* here ಅವರೆಲ್ಲರು ಇಲ್ಲಿ ಇದ್ದಾರೆ.

ಬೇರೆ ಬೇರೆ ಪದವಿರಲಾಗಿ all ಎಂಬದು ಸರ್ವನಾಮದ ಮುಂದೆ ಬರುತ್ತದೆ. ಉದಾ—

They *all* went ಅವರೆಲ್ಲರು ಹೋದರು.

☞ All of us = we all.
All of you = you all.
All of them = they all.

*All of us* are well, *we are all* well {ನಾವೆಲ್ಲರು ಕ್ಷೇಮದಿಂದ ಇದ್ದೇವೆ.

೬೧ Whole ಇಡೀ, ಪೂರಾ, ಅಷ್ಟೂ. ಉದಾ—
The *whole* class was examined ಪೂರಾವರ್ಗದ ಪರೀಕ್ಷೆತಕ್ಕೊಳ್ಳಲಾಯಿತು.

Whole ಎಂಬದರ ಮುಂದೆ of ಎಂಬ ಉಪಸರ್ಗಾನ್ವಯವು ಬಂದರೆ, ಅದರ ಪ್ರಯೋಗವು ನಾಮಪದದಂತೆ ಆಗುತ್ತದೆ. ಉದಾ—

*The whole of* the class was examined ಪೂರಾ ವರ್ಗದ ಪರೀಕ್ಷೆ ತಕ್ಕೊಳ್ಳಲಾಯಿತು.

The *whole* of it ಅದೆಲ್ಲ.

ಒಮ್ಮೊಮ್ಮೆ ಬರೇ whole ಎಂಬ ಶಬ್ದವನ್ನು ಸಹ ನಾಮದಂತೆ ಪ್ರಯೋಗಿಸಬಹುದು. ಉದಾ—

The exercise as a *whole* is very good ಒಟ್ಟಿನ ಮೇಲೆ ನೋಡಲಾಗಿ ಈ ಪಾಠವು ಬಹಳ ಚಲೋದದೆ.

೬೨ Whole[1] ಎಂಬ ಶಬ್ದದಂತೆ all[1] ಎಂಬದಕ್ಕೆ ಸಹ ಒಮ್ಮೊಮ್ಮೆ ಪೂರಾ, ಇಡೀ ಎಂಬ ಅರ್ಥವಾಗುತ್ತದೆಂದು ಹಿಂದೆ ಹೇಳಿಯದೆ, ಆದರೆ ಈ ಎರಡೂ ಶಬ್ದಗಳು ಬೇಕಾದಲ್ಲಿ ಒಂದಕ್ಕೆ ಬದಲಾಗಿ ಮತ್ತೊಂದನ್ನು ಪ್ರಯೋಗಿಸಲಾಗದು, ಹೇಗಂದರೆ—

*All* (all kinds of) honey is sweet ಜೇನುತುಪ್ಪೆಂಬದಷ್ಟು ಸವಿ ಇರುತ್ತದೆ,
*All* men are mortal ಎಲ್ಲರಿಗೂ ಸಾವು ಉಂಟು.

ಈ ವಾಕ್ಯದಲ್ಲಿ the whole of ಎಂದು ಅನ್ನಕೂಡದು. ಆದರೆ—

*All* that honey is sweet ಆ ಜೇನುತುಪ್ಪವಷ್ಟು ಸವಿ ಅದೆ.

ಇಲ್ಲಿ the *whole* of that honey is sweet ಎಂತಲೂ ಅನ್ನಬಹುದು; ಇದೇಮೋರೆಗೆ—

In Thee *all* passion becomes passionless.

ಈ ವಾಕ್ಯದಲ್ಲಿ all ಎಂಬದಕ್ಕೆ ಬದಲಾಗಿ the whole of ಎಂಬದನ್ನು ಹಾಕಕೂಡದು. ಯಾಕಂದರೆ passion ಎಂಬದು ಏಕವಚನವಿದ್ದಾಗ್ಯೂ, ಅದಕ್ಕೆ all passons ಅಥವಾ all kinds of passions ಎಂತ ಬಹುವಚನದ ಅರ್ಥ ಬರುತ್ತದೆ. ಆದರೂ ಎಷ್ಟೋ ವಾಕ್ಯಗಳಲ್ಲಿ ಎರಡೂ ಪ್ರಕಾರಗಳು ನಡೆಯುಬಹುದು.

೬೩ No ( ಯಾರೂ-ಏನೂ ) ಇಲ್ಲ. ಇದರ ಮುಂದೆ ನಾಮಪದವು ಬರುತ್ತದೆ[2]. ಉದಾ—

*No* man knows this ಇದನ್ನು ಯಾರೂ ಅರಿಯರು.

---

1) All ಎಂಬ ಶಬ್ದವನ್ನು ಪ್ರಯೋಗಿಸುವಾಗ, ಮಾತಾಡುವವನು ಇಡೀ ವಸ್ತುವಿನ ಬೇರೆ ಭಾಗಗಳನ್ನು ಕುರಿತು ಭಾವಿಸುತ್ತಾನೆ; whole ಎಂಬುದನ್ನು ಪ್ರಯೋಗಿಸುವಾಗ ಒಟ್ಟು ವಸ್ತುವನ್ನು ನೆನಿಸುತ್ತಾನೆ. ಬೇರೆ ಬೇರೆ ಭಾಗಗಳು ಅವನ ಮನಸಿನಲ್ಲಿ ಬರುವದಿಲ್ಲ. ಆದುದರಿಂದ all ಎಂಬ ಶಬ್ದವು ಬಹುವಚನ ನಾಮವನ್ನು ವಿಶೇಷಿಸುವದು; whole ಎಂಬದು ಬಹುವಚನವನ್ನು ವಿಶೇಷಿಸಲಾರದು; ಏಕವಚನ ನಾಮದೊಡನೆ all ವನ್ನಾಗಲಿ whole ವನ್ನಾಗಲಿ ಪ್ರಯೋಗಿಸಬಹುದು. ಆದರೆ ನಾಮವು ಬಹುವಚನದಲ್ಲಿದ್ದರೆ, all ಎಂಬುದನ್ನೇ ಉಪಯೋಗಿಸಬೇಕು. 2) No ಎಂಬದು ಒಮ್ಮೊಮ್ಮೆ ಕ್ರಿಯಾವಿಶೇಷಣ ಸಹ ಆಗುತ್ತದೆ; ಭಾಷಾಂತರಪಾಠಮಾಲೆ ಎರಡನೇ ಪುಸ್ತಕ ಕಲಮು ೨೬ ನೋಡು.

ಒಮ್ಮೊಮ್ಮೆ all ಎಂಬ ಶಬ್ದವು ಕ್ರಿಯಾಪದದ ಮುಂದೆ ಒರುತ್ತದೆ; ಮತ್ತು ವಾಕ್ಯದಲ್ಲಿ ಸಹಾಯ ಕ್ರಿಯಾಪದವಿದ್ದಾಗ all ಎಂಬದನ್ನು ಆ ಸಹಾಯ ಕ್ರಿಯಾಪದಕ್ಕೂ ಮುಖ್ಯ ಕ್ರಿಯಾಪದಕ್ಕೂ ನಡುವೆ ಹಾಕಬೇಕಾಗುತ್ತದೆ. ಉದಾ—

The world is *all* before us ಸಂಪೂರ್ಣ ಜಗತ್ತು ನಮ್ಮ ಮುಂದೆ ಉಂಟು.
The guests stood *all* aside ಯಾವತ್ತು ಅತಿಥಿಗಳು ಒತ್ತಟ್ಟಿಗೆ ನಿಂತುಕೊಂಡರು.
Thr tigers were *all* killed ಯಾವತ್ತು ಹುಲಿಗಳು ಕೊಲ್ಲಲ್ಪಟ್ಟವು; ಅಥವಾ ಯಾವತ್ತು ಹುಲಿಗಳನ್ನು ಕೊಂದರು.

ಒಮ್ಮೊಮ್ಮೆ all ಎಂಬ ಶಬ್ದದ ಮುಂದಿನ ನಾಮಪದವು ಗುಪ್ತವಿರುತ್ತದೆ.

ಉದಾ—

Death is certain to *all, all* must die ಸಾವು ಎಲ್ಲರಿಗೆ ನಿಶ್ಚಯವಾಗಿ ಬರತಕ್ಕದ್ದು, ಎಲ್ಲರೂ ಸಾಯಲಿಕ್ಕೇ ಬೇಕು.

This is not *all* ಇಷ್ಟೇ ಅಲ್ಲ.

ಸರ್ವನಾಮವು to be ಎಂಬ ಕ್ರಿಯಾಪದಕ್ಕೆ ಕರ್ತೃಪದವಿದ್ದರೆ all ಎಂಬ ಶಬ್ದವು ಕ್ರಿಯಾಪದದ ಮುಂದೆ ಬರುತ್ತದೆ. ಉದಾ –

They are *all* here ಅವರೆಲ್ಲರು ಇಲ್ಲಿ ಇದ್ದಾರೆ.

ಬೇರೆ ಬೇರೆ ಪದವಿರಲಾಗಿ all ಎಂಬದು ಸರ್ವನಾಮದ ಮುಂದೆ ಬರುತ್ತದೆ. ಉದಾ—

They *all* went ಅವರೆಲ್ಲರು ಹೋದರು.

☞ All of us = we all.
All of you = you all.
All of them = they all.

*All of us* are well,
*we are all* well } ನಾವೆಲ್ಲರು ಕ್ಷೇಮದಿಂದ ಇದ್ದೇವೆ.

೮೧ Whole ಇಡೀ, ಪೂರಾ, ಅಷ್ಟೂ. ಉದಾ—

The *whole* class was examined ಪೂರಾವರ್ಗದ ಪರೀಕ್ಷೆತಕ್ಕೊಳ್ಳಲಾಯಿತು.

Whole ಎಂಬದರ ಮುಂದೆ of ಎಂಬ ಉಪಸರ್ಗಾವ್ಯಯವು ಬಂದರೆ, ಅದರ ಪ್ರಯೋಗವು ನಾಮಪದದಂತೆ ಆಗುತ್ತದೆ. ಉದಾ—

*The whole of* the class was examined ಪೂರಾ ವರ್ಗದ ಪರೀಕ್ಷೆತಕ್ಕೊಳ್ಳಲಾಯಿತು.

The *whole* of it ಅದೆಲ್ಲ.

ಒಮ್ಮೊಮ್ಮೆ, ಬರೇ whole ಎಂಬ ಶಬ್ದವನ್ನು ಸಹ ನಾಮದಂತೆ ಪ್ರಯೋಗಿಸಬಹುದು. ಉದಾ—

The exercise as a *whole* is very good ಒಟ್ಟಿನ ಮೇಲೆ ನೋಡಲಾಗಿ ಈ ಪಾಠವು ಬಹಳ ಚಲೋದದೆ.

೮೨ Whole[1] ಎಂಬ ಶಬ್ದದಂತೆ all[1] ಎಂಬದಕ್ಕೆ ಸಹ ಒಮ್ಮೊಮ್ಮೆ ಪೂರಾ, ಇಡೀ ಎಂಬ ಅರ್ಥವಾಗುತ್ತದೆಂದು ಹಿಂದೆ ಹೇಳಿಯದೆ, ಆದರೆ ಈ ಎರಡೂ ಶಬ್ದಗಳು ಬೇಕಾದಲ್ಲಿ ಒಂದಕ್ಕೆ ಬದಲಾಗಿ ಮತ್ತೊಂದನ್ನು ಪ್ರಯೋಗಿಸಲಾಗದು, ಹೇಗಂದರೆ—

*All* (all kinds of) honey is sweet ಜೇನುತುಪ್ಪೆಂಬದಷ್ಟು ಸವಿ ಇರುತ್ತದೆ,
*All* men are mortal ಎಲ್ಲರಿಗೂ ಸಾವು ಉಂಟು.

ಈ ವಾಕ್ಯದಲ್ಲಿ the whole of ಎಂದು ಅನ್ನಕೂಡದು. ಆದರೆ—

*All* that honey is sweet ಆ ಜೇನುತುಪ್ಪವಷ್ಟು ಸವಿ ಅದೆ.

ಇಲ್ಲಿ the *whole* of that honey is sweet ಎಂತಲೂ ಅನ್ನಬಹುದು; ಇದೇಮೇರೆಗೆ—

In Thee *all* passion becomes passionless.

ಈ ವಾಕ್ಯದಲ್ಲಿ all ಎಂಬದಕ್ಕೆ ಬದಲಾಗಿ the whole of ಎಂಬದನ್ನು ಹಾಕಕೂಡದು. ಯಾಕಂದರೆ passion ಎಂಬದು ಏಕವಚನವಿದ್ದಾಗ್ಯೂ, ಅದಕ್ಕೆ all passons ಅಥವಾ all kinds of passions ಎಂತ ಬಹುವಚನದ ಅರ್ಥ ಬರುತ್ತದೆ. ಆದರೂ ಎಷ್ಟೋ ವಾಕ್ಯಗಳಲ್ಲಿ ಎರಡೂ ಪ್ರಕಾರಗಳು ನಡೆಯಬಹುದು.

೮೩ No ( ಯಾರೂ-ಏನೂ ) ಇಲ್ಲ. ಇದರ ಮುಂದೆ ನಾಮಪದವು ಬರುತ್ತದೆ[2]. ಉದಾ—

*No* man knows this ಇದನ್ನು ಯಾರೂ ಅರಿಯರು.

---

1) All ಎಂಬ ಶಬ್ದವನ್ನು ಪ್ರಯೋಗಿಸುವಾಗ, ಮಾತಾಡುವವನು ಇಡೀ ವಸ್ತುವಿನ ಬೇರೆ ಭಾಗಗಳನ್ನು ಕುರಿತು ಭಾವಿಸುತ್ತಾನೆ; whole ಎಂಬುದನ್ನು ಪ್ರಯೋಗಿಸುವಾಗ ಒಟ್ಟು ವಸ್ತುವನ್ನು ನೆನಿಸುತ್ತಾನೆ. ಬೇರೆ ಬೇರೆ ಭಾಗಗಳು ಅವನ ಮನಸಿನಲ್ಲಿ ಬರುವದಿಲ್ಲ. ಆದುದರಿಂದ all ಎಂಬ ಶಬ್ದವು ಬಹುವಚನ ನಾಮವನ್ನು ವಿಶೇಷಿಸುವದು; whole ಎಂಬದು ಬಹುವಚನವನ್ನು ವಿಶೇಷಿಸಲಾರದು; ಏಕವಚನ ನಾಮದೊಡನೆ all ವನ್ನಾಗಲಿ whole ವನ್ನಾಗಲಿ ಪ್ರಯೋಗಿಸಬಹುದು. ಆದರೆ ನಾಮವು ಬಹುವಚನದಲ್ಲಿದ್ದರೆ, all ಎಂಬುದನ್ನೇ ಉಪಯೋಗಿಸಬೇಕು. 2) No ಎಂಬದು ಒಮ್ಮೊಮ್ಮೆ ಕ್ರಿಯಾವಿಶೇಷಣ ಸಹ ಆಗುತ್ತದೆ; ಭಾಷಾಂತರಪಾಠಮಾಲೆ ಎರಡನೇ ಪುಸ್ತಕ ಕಲಮು ೨೬ ನೋಡು.

## ೮೪ ಶಬ್ದಸಂಗ್ರಹ ೧೫

To mourn for {ಮರಗು, ಶೋಕಪಡು, ಸೂತಕ ಹಿಡಿ. Prop'erty ಬದುಕು, ಆಸ್ತಿ, ಜಿಂದಗಿ.
A wid'ow ವಿಧವೆ, ಗಂಡ ಸತ್ತವಳು. A widow-er ಹೆಂಡತಿ ಸತ್ತವನು.
To meas-ure ಅಳೆ, ಗೊತ್ತು ಮಾಡು. Use-full-ness ಉಪಯುಕ್ತತೆ.
To end ಮುಗಿಯು, ಮುಗಿಸು. Dis-po'sal { ೧ ವಶ, ೨ ಯೋಜನಾಧಿಕಾರ, ವ್ಯವಸ್ಥೆ.
To scratch ಕೆದರು, ಕೆರೆ. A tile ಹಂಚು.
A dung-hill ತಿಪ್ಪೆ. Beseech' ಸೆರೆಗೊಡ್ಡು, ಬೇಡಿಕೊಳ್ಳು.
An es-say ನಿಬಂಧ. To as-au-me' ಧರಿಸು.
Drought ಅನಾವೃಷ್ಟಿ, ಬರ. ಕಲ್ಪನೆ, ಯೋಚನೆ ವಿಚಾರ } an ide'a, a no'tion.
ಕಳ್ಳ, ಸುಲಿದುಕೊಳ್ಳುವವ } a rob'ber. ತುಂಬಾ full of.
ಈಗಿನ {pre'sent, of the present day. ಬಾದಾಮಿ an al-mond.
ಅದಲುಬದಲು an ex'change.
ವಿಲಕ್ಷಣವಾದ strange, cu'rious. ಹೆಚ್ಚುಕಡಿಮೆ an al-ter-a'tion.
ಉಪನ್ಯಾಸ, ಭಾಷಣ } a lec'ture. ನಿಚ್ಚಣಿಕೆ a lad'der.
Fast a-sleep ಗಡದು ನಿದ್ದೆ ಹತ್ತಿದ, ಗಾಢ ನಿದ್ರೆಯಲ್ಲಿದ್ದ.
Not at all ಇಲ್ಲವೇ ಇಲ್ಲ. By chance ಅಕಸ್ಮಾತ್ತಾಗಿ.
ಅಭಿಪ್ರಾಯವಿರು to have an o-pin'ion, to hold,-to be of o-pin-ion.
ನನ್ನ ಅಭಿಪ್ರಾಯವು ಹೀಗೆ ಉಂಟು I am of this o-pin-ion.
ಯೋಜನೆಯನ್ನು ಮನಸಿನಲ್ಲಿ ತರು, ಕಲ್ಪನೆಯನ್ನು— { to entertain' a thought-, an ide'a, a no'tion.
ಒಳಗೆ ಬರಗೊಡು to al'low to ent'er. ಕೆಲಸಕ್ಕೆ ಹತ್ತು to set to work.
ಮಾಡಹತ್ತು, ಆರಂಭಿಸು } to be-gin' to do. ಚನ್ನಾಗಿ ನಡೆ, ಸಾಗಿಸು } to get on well.
ಮೇಲೆ ಎರಗು, ಮೇಲೆ ಬೀಳು, ಮೇಲೆ ಹೋಗಿ ಬೀಳು } to fall upon'. to at-tack.

## ಭಾಷಾಂತರಪಾಠ ೧೫

೮೫. I compelled him to go. He was compelled by me to go. We were at last obliged to comply with his request. We are much obliged to you for the timely assistance which you rendered to us. I know *all*. *All* the money was lost. He loved *all* mankind. We walked *all* day. *All* of us are mortal. He went into the country with *all* his family. The *whole* family was fast asleep when the fire broke out. I will show you *all*. In *some* parts of England slates instead of tiles are put on the roofs of houses. I will

take *some* coffee for breakfast. Will you have[1] *some* tea? *Some* of my friends were of dilferent opinion. *Some* of these mangoes are ripe, but *some* are still green. I have *no* money; can you lend me some? *All* is well that ends well. Almost *all* his property went into the hands of his lawyers. *All* my family have gone to the seaside[2], and now the *whole* house is at my disposal. Are you tired? Not at all. *Some* animals have stronger instinct than others. The men whom you see, are of various occupations. Different nations use[3] different kinds of food. Clouds quickly assume different shapes. A *certain* widow came and besought my help. I mourned a *few* days for my friend. *Certain* of your own poets have said the same thing.

A cock was one day scratching on a dunghill. By chance it found a very valuable diamond; but it gave no pleasure to the cock. A grain of barley is more valuable to a cock than *all* the jewels in the world. From this we learn that the real value of a thing should be measured by its usefullness. Several persons think that the rains are over.

ನೀನು ಮಾತಾಡತಕ್ಕದ್ದನ್ನು ಮೊದಲೇ ಮಾತಾಡಿ ಬಿಟ್ಟದ್ದೀ. ನನಗೆ ಬಹಳ ಮಾತಾಡತಕ್ಕದ್ದಿದ್ದಿಲ್ಲ. ನಾನು ಇಷ್ಟು ಮಾತಾಡತಕ್ಕದ್ದಿದ್ದಿಲ್ಲ. ನೀನು ಮತ್ತೂ ಹೆಚ್ಚಿಗೆ ಏನು ಹೇಳತಕ್ಕದ್ದದೆ? ಇನ್ನೂ ನಾಲ್ಕು ಮಾತು[4] ನಾನು ಮಾತಾಡ ತಕ್ಕವನಿದ್ದೆನು. ಈ ಮನುಷ್ಯನು ಮತ್ತೇನು ಅನ್ನುವನು? ನನಗೆ ಇನ್ನೂ ಮೂರು ರೂಪಾಯಿ[5] ಬೇಕು. ನಿನಗೆ ಮತ್ತೇನು ಬೇಕು? ಇನ್ನು ಒಂದು ಮಾತು ಸಹ ಆಡಬೇಡ[6]. ನಾನು ಇಷ್ಟೊಂದು ಮಾತು[7] ಹೇಳತಕ್ಕದ್ದದೆ. ಆ ದೇಶ ದಲ್ಲಿ ನಾವು ನಾನಾ ತರದ ಜನರನ್ನು ಕಂಡೆವು. ಅನೇಕ ಕಾರಣಗಳಿಂದ ನಾನು ಹೀಗೆ ಮಾಡಬೇಕಾಯಿತು[8]. ಅವನ ಬಿನ್ನಹವನ್ನು ನಾನು ಮನ್ನಿಸಬೇಕಾಯಿತು. ಅವನು ಹೋಗಬೇಕಾಯಿತು. ಬೇರೆ ಬೇರೆ ಜನರ ಅಭಿಪ್ರಾಯಗಳು ಬೇರೆ ಬೇರೆ ಯಾಗಿರುತ್ತವೆ. ಎಷ್ಟೋ ಜನರ ಅಭಿಪ್ರಾಯವು ಇದರ ವಿಷಯಕ್ಕೆ ತೀರ ಭಿನ್ನವಾಗಿದೆ. ನನ್ನ ಅಭಿಪ್ರಾಯವೇನಂದರೆ—ನೀನು ಸೌಖ್ಯದಿಂದಿರುವದಕ್ಕೆ

---

1) ಬೇಕೋ? 2) ಸಮುದ್ರ ತೀರದ ಮೇಲೆ ಇರುವದಕ್ಕೆ. 3) ಸೇವಿಸು, ತಿನ್ನು. 4) A few words more. 5) Three rupees more. 6) Not a word more, Do not speak a sngle word more. 7) One word more. 8) I was obliged,-compelled.

ಯತ್ನ ಮಾಡಬೇಕು. ಈ ಹೆಣ್ಣು ಮಗಳು ಯಾವನೋ ಒಬ್ಬ ಸರದಾರನ ಸೊಸೆ. ನೀನು ಹೀಗೆ ಮಾಡದೆ ಇರುವದು ಲೇಸು; ಒಂದು ವೇಳೆ ನನ್ನನ್ನು ಯಾರಾದರೂ ಕಳ್ಳರು ಕೊಂದು ಹಾಕುವರು. ನನ್ನ ಅಭಿಪ್ರಾಯವೇನಂದರೆ--ನೀನು ಹೀಗೆ ಮಾಡಬಾರದು. ನನ್ನ ಅಭಿಪ್ರಾಯವಾದರೂ ಹಾಗೇ ಉಂಟು. ಈ ಮಾತಿನ ವಿಷಯಕ್ಕೆ ನಿನ್ನ ಅಭಿಪ್ರಾಯವೇನು? ನೀತಿಯ ವಿಷಯಕ್ಕೆ ಕೆಲವು ಜನರ ವಿಚಾರಗಳು ವಿಲಕ್ಷಣವಾಗಿರುತ್ತವೆ[1]. ಎಂಥ ವಿಲಕ್ಷಣವಾದ ಕಲ್ಪನೆ! ನೀನು ಇಂಥ ಯೋಚನೆಗಳನ್ನು ಮನಸಿನೊಳಗೆ ಬರಗೊಡಬೇಡ. ಇಂಥ ಕಲ್ಪನೆಯನ್ನು ಮನಸ್ಸಿನಲ್ಲಿ ತರಬೇಡ. ನೀನು ನಿನ್ನ ಮನಸ್ಸಿನೊಳಗೆ ಇಂಥ ವಿಲಕ್ಷಣವಾದ ಕಲ್ಪನೆಯನ್ನು ಯಾಕೆ ಬರಗೊಡಬೇಕು?

ಎಷ್ಟೋ ವಿಲಕ್ಷಣವಾದ ಪ್ರಾಣಿಗಳು ಮಹಾಸಾಗರದಲ್ಲಿ ದೊರೆಯುತ್ತವೆ. ಧರ್ಮದ ವಿಷಯಕ್ಕೆ ನನ್ನ ವಿಚಾರಗಳು ಬಹಳ ಭಿನ್ನವಾಗಿವೆ. ಈ ಮಾತಿನ ವಿಷಯಕ್ಕೆ ಸ್ವಲ್ಪ ತಪ್ಪು ತಿಳುವಳಿಕೆಯುಂಟು. ಕೆಲವು ಅಂತರದ ಮೇಲೆ ಒಂದು ದೊಡ್ಡ ಸೈನ್ಯವಿತ್ತು. ಸುಮಾರು[2] ತೊಂಬತ್ತು ವರ್ಷಗಳ ಹಿಂದೆ ಆದದ್ದೇನಂದರೆ ಇಂಗ್ಲಿಷರು ಪುಣೆ ಪಟ್ಟಣದ ಮೇಲೆ ದಂಡೆತ್ತಿ ಬಂದರು. ಎರಡನೇ ಬಾಜೀರಾಯನು ಬಹಳ ಪುಕ್ಕನಿದ್ದನು. ಅಷ್ಟೂ ಹಣ ಅವನು ನನಗೆ ಸ್ವಲ್ಪ ದಿವಸದೊಳಗೆ ತಿರುಗಿ ಕೊಟ್ಟನು. ಅವನು ಇಡೀ ವರ್ಗದ ಪರೀಕ್ಷೆ ತೆಗೆದುಕೊಂಡನು. ಎಲ್ಲ ಹುಡುಗರ ಪರೀಕ್ಷೆ ತೆಗೆದುಕೊಂಡದೆ. ಎಲ್ಲರೂ ಈ ಅಡಚಣಿಯನ್ನು ತಾಳಬೇಕಾಗುವದು. ಈ ಸುದ್ದಿಯು ಕೂಡಲೆ ಎಲ್ಲ ಮುಂಬಯಿ ತುಂಬ[3] ಹಬ್ಬಿತು. ಇಡೀ ವರ್ಷದಿಂದ ನೀನು ಮನೆ ಕಟ್ಟುವ ಆಲೋಚನೆಯಲ್ಲಿದ್ದೀ; ಆದರೆ ಅದನ್ನು ನಿಶ್ಚಯವಾಗಿ[4] ಯಾವಾಗ ಕಟ್ಟುವಿ? ನಾವೆಲ್ಲರೂ ಅದೇ ಅಭಿಪ್ರಾಯದವರಿದ್ದೇವೆ. ಅವರೆಲ್ಲರು ಅವೇ ಉಪಾಯಗಳನ್ನು ಮಾಡಿದರು. ನೀವೆಲ್ಲರೂ ಅದೇ ಹಂಚಿಕೆ ಮಾಡಬೇಕಾಗುವದು. ಅದೆಲ್ಲ ಸುಳ್ಳು ಅದೆ. ಅವನು ಹುಚ್ಚನ ಸೋಗು ಹಾಕಿದ್ದನು. ಈ ಪತ್ರದಲ್ಲಿ ತುಂಬ ತಪ್ಪುಗಳಿವೆ. ಅವನ್ನೆಲ್ಲ ನೀನು ತಿದ್ದಬೇಕಾಗುವದು. ನಾನು ಆ ಪಂಡಿತನ ಉಪನ್ಯಾಸವನ್ನು ಕೇಳುವದಕ್ಕೆ ಹೋದೆನು, ಆದರೆ ಅದನ್ನು ಪೂರಾ ಕೇಳಲಿಲ್ಲ. ಗದ್ದಲವು ಬಹಳ ಇದ್ದದರಿಂದ ಅಷ್ಟೂ ಕೇಳುವದು ಬಹಳ ಕಠಿಣವಿತ್ತು. ಕೋಣೆಯೊಳಗೆ ಹುಡುಗರೇ ಇದ್ದಿಲ್ಲ. ಕೋಣೆಯೊಳಗೆ ಸಕ್ಕರೆಯೇ ಇದ್ದಿಲ್ಲ.

---

**1) Some people have,-entertain. 2) Some, about. 3) Over all Bombay, over the whole of,- 4) For certain.**

# ೧೧ ನೇ ಪಾಠ.

## ಸಾಮಾನ್ಯಾರ್ಥಕ ಸರ್ವನಾಮಗಳು (ಮುಂದೆ ಸಾಗಿದ್ದು).

## Indefinite pronouns (Continued).

೮೬ **Any** ಎಂಬ ಶಬ್ದದ ಅರ್ಥಗಳಲ್ಲಿ ಎಷ್ಟೋ ಸೂಕ್ಷ್ಮವಾದ ಭೇದಗಳುಂಟು ಆದುದರಿಂದ, ಅದರ ಭಾಷಾಂತರವು ಯಾವಾಗಲೂ ಒಂದೇ ಶಬ್ದದಿಂದ ಆಗುವದಿಲ್ಲ. ಅದರ ಮುಖ್ಯವಾದ ಅರ್ಥಗಳು ಯಾವವೆಂದರೆ—

೧) ಏನೂ, ಯಾರೂ, ಯಾರಾದರೂ, ಯಾವಬೇಕಾದವ. ಉದಾ-

**He did it without *any* hesitation** ಹಿಂದು ಮುಂದೇನೂ ನೋಡದೆ ಅವನು ಅದನ್ನು ಮಾಡಿದನು.

**He is taller than *any* of his school-fellows** ಅವನು ತನ್ನ ಸಾಲೆಯ ಜತೆಗಾರರಲ್ಲಿ ಯಾವ ಬೇಕಾದವನಿಗಿಂತ ಎತ್ತರ ಇದ್ದಾನೆ. ಅಂದರೆ ಎಲ್ಲರಿಗಿಂತ ಎತ್ತರನಿದ್ದಾನೆ.

**Can *any* man believe this?** ಯಾರಾದರೂ ಇದನ್ನು ನಂಬಬಹುದೋ?

೨) ಯಾರು, ಬೇಕಾದವರು, ಪ್ರತಿ ಒಬ್ಬರು. ಉದಾ—

***Any* one can do this work.** ಯಾರು ಬೇಕಾದವರು ಈ ಕೆಲಸವನ್ನು ಮಾಡಬಲ್ಲರು.

೩) ಯಾರಾದರೂ ಒಬ್ಬರು, ಯಾವದಾದರೂ ಒಂದು, ಏನಾದರೂ.

ಉದಾ— **Is there *any* body in that room?** ಆ ಕೋಣೆಯಲ್ಲಿ ಯಾರಾದರೂ ಇದ್ದಾರೋ?

**Are there *any* mango-trees in your garden?** ನಿಮ್ಮ ತೋಟದೊಳಗೆ ಮಾವಿನ ಮರಗಳೇನಾದರೂ ಉಂಟೋ?

ಒಮ್ಮೊಮ್ಮೆ **Any** ಎಂಬದರ ಮುಂದಿನ ನಾಮಪದವನ್ನು ಬಿಟ್ಟುಬಿಡುತ್ತಾರೆ.

ಉದಾ—**We have no melons in our garden; have you *any* in yours?** ನಮ್ಮ ತೋಟದೊಳಗೆ ಕರಬೂಜಗಳಿಲ್ಲ; ನಿಮ್ಮ ತೋಟದೊಳಗೇನಾದರೂ ಉಂಟೋ?

☞ **Any** ಎಂಬದಕ್ಕೆ ಹೊಂದಿ ಹಿಂದೆ **not** ಎಂಬ ಶಬ್ದವು ಬರುತ್ತಿದ್ದರೆ ಎರಡೂ ಶಬ್ದಗಳ ಬದಲಾಗಿ **no** ಎಂಬ ಶಬ್ದವನ್ನು ಹಾಕುವರು. ಉದಾ—

**There is *no* book on the table** ಮೇಜಿನ ಮೇಲೆ ಯಾವ ಪುಸ್ತಕವೂ ಇಲ್ಲ.
**I have *no* book with me** ನನ್ನ ಹತ್ತರ ಯಾವ ಪುಸ್ತಕವೂ ಇಲ್ಲ.

೮೭ Enough ಬೇಕಾದಷ್ಟು, ಸಾಕಾದಷ್ಟು, ತಕ್ಕಮಟ್ಟಿಗೆ.

ಇದಕ್ಕೆ ನಾಮಪದವು ಒಮ್ಮೊಮ್ಮೆ ಬೇಕಾಗುತ್ತದೆ, ಒಮ್ಮೊಮ್ಮೆ ಬೇಕಾಗುವದಿಲ್ಲ. ನಾಮಪದವು ಬೇಕಾದರೆ, ಅದು ಬಹುತರವಾಗಿ enough ದ ಹಿಂದೆ ಬರುತ್ತದೆ[1]. ಉದಾ—

I will give you gold *enough* ನಾನು ನಿನಗೆ ಬೇಕಾದಷ್ಟು ಬಂಗಾರ ಕೊಡುವೆನು.

The tea does not require more sugar, it has *enough* already ಆ ಚಹಕ್ಕೆ ಹೆಚ್ಚಿಗೆ ಸಕ್ಕರೆ ಬೇಡ, ಅದರೊಳಗೆ ಈಗಲೇ ಬೇಕಾದಷ್ಟು ಅದೆ.

He had *enough* to do ಅವನಿಗೆ ಸಾಕಷ್ಟು ಕೆಲಸವಿತ್ತು.

We have had *enough* of the dish ಈ ಪಕ್ವಾನ್ನವು ನಮಗೆ ಸಾಕಾಗುವಷ್ಟಿತ್ತು.

Enough ಇದು ನಾಮದ ಹಿಂದೆ ಬರುವದೇ ಇಲ್ಲ ಎಂದು ಹೇಳಕೂಡದು.

ಉದಾ—You have done quite *enough* harm already ನೀನು ಮೊದಲೇ ಬೇಕಷ್ಟು ಕೇಡು ಮಾಡಿಬಿಟ್ಟಿದ್ದೀ.

೮೮ Other = ಎರಡನೇ, ಬೇರೆ. ಇದರ ಹಿಂದೆ an ಎಂಬ ಉಪಪದವು ಬಂದರೆ ಒಂದು ಅರ್ಥವಾಗುತ್ತವೆ. the ಎಂಬ ಉಪಪದವು ಬಂದರೆ ಒಂದು ಅರ್ಥವಾಗುತ್ತದೆ[2]. An ಎಂಬ ಉಪಪದವನ್ನು other ಎಂಬ ಶಬ್ದಕ್ಕೆ ಕೂಡಿಸಿ ಬರೆಯಬೇಕು. Other ದ ಬಹುವಚನವು others ಎಂತ ಆಗುತ್ತದೆ; ಆದರೆ ಬಹುವಚನದ ಮುಂದೆ ನಾಮಪದವು ಬರುವದಿಲ್ಲ; ಮುಂದೆ ನಾಮಪದವು ಬಂದರೆ, ಏಕವಚನದಲ್ಲಿಯೂ ಬಹುವಚನದಲ್ಲಿಯೂ other ಎಂಬ ರೂಪವನ್ನೇ ಪ್ರಯೋಗಿಸಬೇಕು.

ಉದಾ—Come to see me some *other* day ಮತ್ತೆ ಎಂದಾದರೂ ಒಂದು ದಿನ ನನಗೆ ಭೆಟ್ಟಿಯಾಗಿರಿ.

I have bought *another* umbrella ನಾನು ಮತ್ತೊಂದು ಕೊಡೆಯನ್ನು ಕೊಂಡಿದ್ದೇನೆ.

I have lost my book, I must buy *another* ನನ್ನ ಪುಸ್ತಕವನ್ನು ಕಳಕೊಂಡೆನು, ನಾನು ಮತ್ತೊಂದು ಕೊಳ್ಳಬೇಕು.

Where is *the other* boy ? (ಆ) ಎರಡನೇ ಹುಡುಗನು ಎಲ್ಲಿದ್ದಾನೆ ?

He had *other* companions with him ಅವನ ಕೂಡ ಎರಡನೇ ಜತೆಗಾರರಿದ್ದರು.

---

1) Sufficient ಎಂಬ ವಿಶೇಷಣದ ಅರ್ಥವಾದರೂ 'ಸಾಕಷ್ಟು' ಎಂತ ಆಗುತ್ತದೆ.
2) ಅನೇಕ ವಸ್ತುಗಳಲ್ಲಿ ಒಂದರ ವಿಷಯಕ್ಕೆ ಮಾತಾಡಿದ ಬಳಿಕ ಮತ್ತೊಂದರ ವಿಷಯಕ್ಕೆ ಮಾತಾಡುವದಾದರೆ another ಎಂಬದನ್ನೂ, ಎರಡರಲ್ಲಿ ಒಂದರ ವಿಷಯಕ್ಕೆ ಮಾತಾಡಿದ ನಂತರ ಉಳಿದದ್ದರ ವಿಷಯಕ್ಕೆ ಮಾತಾಡುವದಾದರೆ the other ಎಂಬದನ್ನೂ ಪ್ರಯೋಗಿಸಬೇಕು. others ಎರಡನೇಯವರು, the others (ಆ) ಎರಡನೇಯವರು, ಉಳಿದವರು.

Are these all the arguments? No there are *others* ಯಾವತ್ತು ಪ್ರಮಾಣಗಳು ಇಷ್ಟೇಯೋ? ಅಲ್ಲ, ಇನ್ನೂ ಕೆಲವು ಉಂಟು.

I saw some of those books, but not the *others* ಆ ಪುಸ್ತಕಗಳಲ್ಲಿ ಕೆಲವು ನಾನು ನೋಡಿದೆನು, ಆದರೆ ಉಳಿದವುಗಳನ್ನು ನೋಡಲಿಲ್ಲ.

ಒಮ್ಮೊಮ್ಮೆ others ಎಂಬದರ ಅರ್ಥವು ಉಳಿದವರು ಎಂತ ಆಗುತ್ತದೆ.

Some sat, *others* stood ಕೆಲವರು ಕೂತಿದ್ದರು, ಉಳಿದವರು ನಿಂತಿದ್ದರು.
Every other day ಒಂದು ದಿವಸ ಬಿಟ್ಟು ಒಂದು ದಿವಸ.

೮೯ Such ಎಂಬದರ ಅರ್ಥವು ಇಂಥ ಈ ತರದ ಎಂತ ಆಗುತ್ತದೆ. ಉದಾ

I have never seen *such* Mangoes ಇಂಥ ಮಾವಿನ ಹಣ್ಣುಗಳನ್ನು ನಾನು ಎಂದೂ ನೋಡಿಲ್ಲ.

## ೯೦ ಶಬ್ದಸಂಗ್ರಹ ೧೬.

| | | | |
|---|---|---|---|
| An at-tempt' | ಪ್ರಯತ್ನ. | Heart'y (ವಿ) | ಮನಃಪೂರ್ವಕ. |
| A de-feat' | ಅಪಜಯ, ಸೋಲು. | A laugh | ನಗೆ. |
| Neigh'bour-hood | ನೆರೆಹೊರೆ, ಸಮೀಪ, | Ful'ly | ಸಂಪೂರ್ಣವಾಗಿ, ಪೂರಾ. |
| To sur-pass | ಮೀರು, ಹಿಂದೆಹಾಕು. | To hesi'tate | ಅನುಮಾನಿಸು, ಹಿಂದು ಮುಂದು ನೋಡು. |
| To expose | ೧ ಹೊರಗೆ ಇಡು, ೨ ಬೈಲಿಗೆ ತರು. | Dread'ful | ಭಯಂಕರವಾದ. |
| Storm | ಬಿರುಗಾಳಿ. | To in-fer | ಊಹಿಸು, ಅನುಮಾನ ಮಾಡು, ತರ್ಕದಿಂದ ತಿಳಿ. |

| | |
|---|---|
| To dis'honour a man | ಒಬ್ಬರ ಮಾನಕ್ಕೆ ಕುಂದು (ಹಾನಿ) ತರು, ಒಬ್ಬರ ಅಪಮಾನ ಮಾಡು. |
| To meet with de-feat' | ಅಪಜಯಹೊಂದು, ಸಿದ್ಧಿಗೆ ಹೋಗದಿರು, ಸೋಲು. |
| Scarce'ly | ಕ್ವಚಿತವಾಗಿ, ತೀರಸ್ವಲ್ಪ. |
| To try a pen | ಲೆಕ್ಕಣಿಕೆ, ಬರೆದು ನೋಡು. |
| To play at chess | ಚದುರಂಗ ಆಡು. |
| To en-joy the beauty | ಯಾವದಾದರೊಂದು ಕಾವ್ಯದ ಸವಿನೋಡು. ಅದರೊಳಗಿನ ಅಲಂಕಾರ ಮುಂತಾದ ಚಮತ್ಕಾರಗಳನ್ನು ತಿಳಿ, ಸವಿ. |
| Some'thing or oth'er | ಒಂದಿಲ್ಲೊಂದು, ಏನಾದರೂ. |
| In jest, in joke | ನಗಚಾಟಿಕೆಯಿಂದ, ಹಾಸ್ಯದಿಂದ. |
| To pay one's debts | ಸಾಲಾ ಹರಿ, ಋಣ ತೀರಿಸು. |
| It de-pends on you | ಇದು ನಿನ್ನನ್ನು ಅವಲಂಬಿಸಿ ಇದೆ, ಇದು ನಿನ್ನ ಕಡೆಗೆ ಇದೆ, ಇದು ನಿನ್ನನ್ನು ಕೂಡಿಯದೆ. |

## ಭಾಷಾಂತರ ಪಾಠ ೧೬

೯೧. His daughter can now read *any* English book without much difficulty. *Any* attempt on your part to dishonour him is sure to meet with defeat. Have you any oranges in your garden? Yes, sir, I have some. Have you *any* money with you? They had scarcely *any* bread in the house. I tried that pen; now let me try the other. I have not got *another*. My attention was fixed on *another* object. I play at chess every evening or at least *every other* evening. My brother goes to Poona *every other* year. Will you allow me to give you a cup of tea? No thank you Well, have *another* mango then. Which do you prefer, mangoes or oranges? Do you know *any* good physician in the neighbourhood? Have you read *any* of Argala Deva's Kanarese poems? I have read only a few; they are rather difficult for me, and therefore I cannot enjoy the beauty of them. Few Kanarese poets surpass him. Every time he goes to Dhrawar he meets with *some* misfortune or the *other*. I will not hear *another* word on the subject, *The other day* we had such a dreadful storm that several trees were torn up by the roots[1]. She has the fever *every other day*. I go to London *every other year* to see my relations. He is always full of jokes[2]. This exercise is very easy; you can easily write it after supper. We had a hearty laugh[3]. We laughed heartily at his nonsense. I said that in joke. The bottle is full. I am fully convinced that he is not able to pay his debts. We depend on you to get us out of this difficulty.

ನಿಮ್ಮ ತೋಟದೊಳಗೆ ಕಲ್ಲಂಗಡಿ ಹಣ್ಣುಗಳುಂಟೋ? ಯಾರಿಗಾದರೂ ಈ ಮಾತು ಹೇಗೆ ಸರಿ ಬಂದೀತು? ಇದನ್ನು ಮಾಡುವದು ಯಾರ ಮನಸ್ಸಿಗೂ ಬಾರದು. ಯಾರು ಬೇಕಾದವರು ಹೇಗೆ ಮಾಡಿಯಾರು? ನಾನು ಪುಣೆಗೆ ಹೋಗುವದಿತ್ತು; ಆದರೆ ನನ್ನ ಹತ್ತರ ಬೇಕಾದಷ್ಟು ಹಣವಿದ್ದಿಲ್ಲ. ಕೆಲವರು ನನಗೆ ಏನೂ ಸಹಾಯ ಮಾಡಲಿಲ್ಲ. ಮತ್ತು ಉಳಿದವರು ಅನುಮಾನಿಸುತ್ತಿದ್ದರು. ಅವನ ತಂದೆಗೆ ಈ

1) ಬೇರು ಸಹಿತ ಕಿತ್ತು ಬಿದ್ದವು. 2) ಅವನು ಯಾವಾಗಲೂ ನಗಚಾಟಿಕೆ ಮಾಡುತ್ತಾನೆ. 3) ಬಿದ್ದು ಬಿದ್ದು ನಕ್ಕೆವು.

ಮಾತು ಹೇಗೆ ತಿಳಿಯಿತು? ಅವನು ಒಂದು ದಿವಸ ಬಿಟ್ಟು ಒಂದು ದಿವಸ ನನ್ನ ಕೂಡ ಬರಬೇಕಾಗುತ್ತದೆ. ಕೆಲವು ದಿವಸಗಳ ಹಿಂದೆ ಅವನು ಹೀಗೆ ಮಾಡ ತಕ್ಕದ್ದಿತ್ತು. ಅವನ ದೋಷಗಳನ್ನು ಬೈಲಿಗೆ ತಂದವರಾರು? ಎರಡು ಮೂರು ದಿವಸ ಗಳ ಹಿಂದೆ ಅವನ ಹತ್ತರ ಏನೂ ಹಣವಿದ್ದಿಲ್ಲ; ಆದರೆ ಈವೊತ್ತು ಅವನ ಹತ್ತರ ಬಹಳ ಹಣವುಂಟು. ಕೆಲವರು ಬಂದಿದ್ದಾರೆ, ಆದರೆ ಇನ್ನೂ ಕೆಲವರು ಬರತಕ್ಕವ ರಿದ್ದಾರೆ. ಎರಡನೇ ಯಾವ ಮನುಷ್ಯನೂ ನಿನ್ನ ಬಿನ್ನಹಕ್ಕೆ ಒಪ್ಪನು. ನನಗೆ ಏನೂ ಬೇಕಾಗಿಲ್ಲ. ಅಂಥ ಯಾವ ಆಲೋಚನೆಯಿಂದಲೂ ನನ್ನ ಮನಸ್ಸು ಒಲಿಯದು. ಜೈನರೊಳಗೆ ೧೦ ರಿಂದ ೧೩ ಶತಮಾನಗಳ ವರೆಗೆ ಪಂಪ, ಹೊನ್ನ, ರನ್ನ, ಜನ್ನ, ಅರ್ಗಳ, ಅಂಡಯ್ಯ ಮುಂತಾದ ದೊಡ್ಡ ದೊಡ್ಡ ಕನ್ನಡ ಕವಿಗಳಾಗಿ ಹೋದರು.

### ೯೨ ಶಬ್ದಸಂಗ್ರಹ ೧೭.

A mule ಹೇಸರಗತ್ತೆ.
A load ಹೊರೆ, ಮೊಟ್ಟೆ.
La'den ಹೇರಿದ (ಸಾಮಾನು, ಒಜ್ಜೆ).
A bur'den ಭಾರ, ಒಜ್ಜೆ.
A dri'ver {ಹೊಡಕೊಂಡು ಹೋಗುವವ, ನಡೆಸುವವ, ಚಾಲಕ.
On, on'ward (ಕ್ರಿ. ವಿ) ಮುಂದೆ.
Hu-man'i-ty ಭೂತದಯೆ, ಕರುಣೆ.
To sus-tain' ತಾಳು.
ಗುಣಗುಟ್ಟು to grum'ple.
ಸ್ಥಿತಿ a condi'ti'on, a state.
No lon'ger (ಕ್ರಿ. ವಿ.) ಇನ್ನು ಮುಂದೆ ಇಲ್ಲ, ಹೆಚ್ಚಿಗೆ ಇಲ್ಲ.
To re-lieve' a per'son {ಒಜ್ಜೆ ಇಳಿಸು, ಯಾರಿಗಾದರೂ ಸಹಾಯ ಮಾಡು, ಮುಕ್ತ ಮಾಡು.
To be pleased (with) ಸಂತೋಷಪಡು, ಮೆಚ್ಚು.
To give in ಧೈರ್ಯಬಿಡು, ಹಿಂದೆ ಸರಿ, ಹಿಮ್ಮೆಟ್ಟು.

### ಭಾಷಾಂತರಪಾಠ ೧೭.

೯೩. A poor soldier was one day leading a mule laden with gold coins, belonging to a great king. The king himself was following on a horse back. The mule was so tired that it was unable to carry the load any farther. The driver then relieved the animal of its load and carried it on his own shoulders but with great difficulty. The king was pleased with the soldier's humanity; and when the soldier was so tired that he was about to sink under the burden and to throw it on the ground, he said to him; "Do not give in yet. Try and carry it on to your tent, for it is all your own[1]".

1) ನಿನ್ನದೇ.

ಅವನು ನನ್ನ ಮೇಲೆ ಏನೂ ಉಪಕಾರ ಮಾಡಿಲ್ಲ. ನಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳುವದಕ್ಕೆ ನಾವು ಇನ್ನೂವರೆಗೆ ಏನೂ ಉಪಾಯ ಮಾಡಲಿಲ್ಲ. ಏನೂ ಕಾರಣವಿಲ್ಲದೆ ಅವನು ಸಿಟ್ಟಿಗೆದ್ದನು. ಏನೂ ಕಾರಣವಿಲ್ಲದೆ ನಾನು ನನ್ನ ಕಾಲುಗಳನ್ನು ಯಾಕೆ ದಣಿಸಿಕೊಳ್ಳಬೇಕು? ಗಿಡದ ಮೇಲೆ ಹೂವೇ ಇದ್ದಿಲ್ಲ. ಅವನು ಬೇಕಾದಾಗ ಹೀಗೆ ಮಾಡಬಹುದು. ಅವನು (ಒಂದು ವೇಳೆ) ಹೋಗಿರ ಬಹುದು. ನನಗೆ ಹಲವು ಜಿನಸುಗಳು ಬೇಕಾಗಿದ್ದವು. ಅವನದೊಂದು ಕಣ್ಣೊಳಗೆ ಏನೋ ಕುಂದು ಉಂಟು, ಆದರೆ ಎರಡನೇದು ನೆಟ್ಟಗದೆ[1]. ಎರಡನೇ ಕಾರಣಗಳಿದ್ದವು. ನೀವು ನಿಮ್ಮ ಮನೆಯ ಬಗ್ಗೆ ಏನು ವ್ಯವಸ್ಥೆಯನ್ನು ಮಾಡಿದ್ದೀರಿ? ನಿನ್ನ ಮನೋರಥವು ಶೀಘ್ರವಾಗಿ ಕೈಗೂಡಿ ಬರುವದು[2]. ನೀನು ಗುಣಗುಟ್ಟುವದೇಕೆ? ಈ ಮನೆಯು ನನ್ನ ಮನಸ್ಸಿಗೆ ಬರುವದಿಲ್ಲ. ನಾನು ಎರಡನೇದು ಕೊಳ್ಳಬೇಕಾಗುವದು. ನೀನು ಈ ಕೆಲಸದೊಳಗೆ ಕೈಹಾಕಬಾರದೆಂದು ನನ್ನ ಅಭಿಪ್ರಾಯವುಂಟು. ನೀನು ಯಾವ ಅಡಚಣಿಯನ್ನೂ ಸಹಿಸಬೇಕಾಗಲಿಕ್ಕಿಲ್ಲ. ಅವನ ಪಕ್ಷದಿಂದ ನೀನು ಏನೂ[3] ಮಾತಾಡಬೇಡ. ನಾನು ಅವನಿಗೆ ಎರಡು ಪತ್ರಗಳನ್ನು ಕಳುಹಿಸಿದೆನು. ಆದರೆ ಇನ್ನೂ ನನಗೆ ಉತ್ತರವೇ ಬರಲಿಲ್ಲ[4]. ನೀನು ನಿನ್ನ ನೆರೆಯವರನ್ನು ಯಾವಾಗಲೂ ದೂಡುತ್ತಿರುತ್ತೀ. ಅವನು ಬಹುತರ[5] ಬರಲಿಕ್ಕಿಲ್ಲ. ಕೋಣೆಯೊಳಗೆ ಒಬ್ಬ[6] ಹುಡುಗನು ಸಹ ಇದ್ದಿಲ್ಲ. ಜಾಣನಿಗೆ ಮಾತಿನ ಪೆಟ್ಟು, ದಡ್ಡನಿಗೆ ಡೊಣ್ಣೀ ಪೆಟ್ಟು[7].

---

## ೧೨ ನೇ ಪಾಠ.

### ಸಾಮಾನ್ಯಾರ್ಥಕ ಸರ್ವನಾಮಗಳು (ಮುಂದೆಸಾಗಿದ್ದು).

### Indefinite pronouns (continued).

೯೪ One = ಯಾರಾದರೂ, ಈ ಅರ್ಥವಿರಲಾಗಿ ಇದರ ಮುಂದೆ ನಾಮಪದವು ಬರುವದಿಲ್ಲ ಉದಾ—

*One* always gives advice more readily than money ಯಾರಾದರೂ ಹಣ ಕೊಡುವದಕ್ಕಿಂತ ಉಪದೇಶ ಹೇಳುವದಕ್ಕೆ ಯಾವಾಗಲೂ ಸಿದ್ಧರಾಗುತ್ತಾರೆ, ಅಂದರೆ ಯಾರಾದರೂ ಯಾವಾಗಲೂ ಉಪದೇಶ ಹೇಳುವದಕ್ಕೆ ತಯಾರು ಇದ್ದಷ್ಟು ಹಣ ಕೊಡುವದಕ್ಕೆ ಇರುವದಿಲ್ಲ.

---

1) Good, all right. 2) You will soon accomplish your object, or You will soon succeed in your object. 3) Anything. 4) To receive. 5) Most probably, to be not likely to. 6) ಒಬ್ಬನೂ ಇಲ್ಲ = not a single, not one. 7) A nod for the wise and a rod for the fools.

☞ One ಎಂಬ ಶಬ್ದವು ಕರ್ತೃಪದವಿದ್ದು ಅದಕ್ಕೆ ಬದಲಾಗಿ ವಾಕ್ಯದಲ್ಲಿ ಮುಂದೆ ಸರ್ವನಾಮವನ್ನು ಹಾಕುವದಾದರೆ, one ಎಂಬ ಶಬ್ದವನ್ನೇ ಹಾಕಬೇಕು. his, her ಅಥವಾ its ಎಂಬವುಗಳನ್ನು ಹಾಕಬಾರದು[1]. ಉದಾ—

*One* does not always know *one's* own faults ಯಾರಿಗಾದರೂ ತನ್ನ ತಪ್ಪುಗಳು ತಮಗೆ ಯಾವಾಗಲೂ ಗೊತ್ತಿರುತ್ತವೆಂದು ಹೇಳಕೂಡದು.

If *one* is Poor, *one* is always neglected ಯಾರಾದರೂ ಬಡವರಿದ್ದರೆ ಅವರನ್ನು ಯಾವಾಗಲೂ ಅಲಕ್ಷ ಮಾಡುತ್ತಾರೆ.

One's self ತಾನೇ, ತಾನು, ಸ್ವತಃ. ಉದಾ—

*One* must not praise *one's* self ಯಾರೂ ಆತ್ಮಸ್ತುತಿ ಮಾಡಿಕೊಳ್ಳಬಾರದು.

೯೫ One ಎಂಬದರ ಮುಂದೆ ಅಂಕಿತನಾಮವು ಬಂದರೆ ಯಾವನೋ ಒಬ್ಬ, ಒಬ್ಬ ಎಂಬ ಅರ್ಥವಾಗುತ್ತದೆ; ಮತ್ತು ಅದರಿಂದ ಅವನು ಅಪ್ರಸಿದ್ಧವಾದ ಮನುಷ್ಯನು ಅಥವಾ ಅವನ ಬಗ್ಗೆ ಹೆಚ್ಚು ವೃತ್ತಾಂತ ಹೇಳಕೂಡದು, ಅಥವಾ ಹೇಳುವದು ವಿಶೇಷವಾಗಿ ಅವಶ್ಯವಿಲ್ಲ ಎಂಬ ಅರ್ಥ ಹೊರಡುತ್ತದೆ. ಉದಾ—

She is the sister of one Phakirappa ಅವಳು ಯಾವನೋ ಒಬ್ಬ ಫಕೀರಪ್ಪ ಎಂಬವನ ತಂಗಿಯು.

೯೬ One ಎಂಬ ಸರ್ವನಾಮವನ್ನು ಒಮ್ಮೊಮ್ಮೆ ವಾಕ್ಯದೊಳಗಿನ ನಾಮಪದಕ್ಕೆ ಬದಲಾಗಿ ಹಾಕುವರು. ಆಗ ಅದರ ಬಹುವಚನವು ones ಆಗುತ್ತದೆ.ಉದಾ

This umbrella is of no use; I intend to Purchase a new *one* ಈ ಕೊಡೆ ಏನೂ ಉಪಯೋಗದ್ದಲ್ಲ; ಹೊಸದೊಂದು ಕೊಳ್ಳುವದು ನನ್ನ ಮನಸ್ಸಿನಲ್ಲಿ ಅದೆ.

These books are torn; you had better buy new *ones* ಈ ಪುಸ್ತಕಗಳು ಹರಿದಿವೆ; ನೀವು ಹೊಸವು ಕೊಳ್ಳುವದು ಒಳ್ಳೇದು.

೯೭ None = no + one ಒಂದೂ ಇಲ್ಲ, ಏನೂ ಇಲ್ಲ ಈ ಶಬ್ದವನ್ನು ಎರಡೂ ವಚನಗಳಲ್ಲಿ ಉಪಯೋಗಿಸಬಹುದು. ಇದರ ಮುಂದೆ ನಾಮಪದವು ಬರುವದಿಲ್ಲ. ಉದಾ—

I wanted a piece of paper but there was *none* ನನಗೆ ಒಂದು ಚೂರು ಕಾಗದ ಬೇಕಾಗಿತ್ತು. ಆದರೆ ಕಾಗದವೇ ಇದ್ದಿಲ್ಲ.

---

1) ಆದರೆ ಈ ನಿಯಮವು every one, each one, no one ಮುಂತಾದ ಸಂಯುಕ್ತ ಸರ್ವನಾಮಗಳಿಗೆ (ಕಲಮು ೧೦೬ ನೋಡು) ಹತ್ತುವದಿಲ್ಲ.

All king Solomon's vessels were of gold, there were *none* of Silver ಸೊಲೊಮೊನ ಅರಸನ ಯಾವತ್ತು ಪಾತ್ರೆಗಳು ಬಂಗಾರದವಿದ್ದವು, ಬೆಳ್ಳಿಯವುಇದ್ದಿದ್ದೇ ಇಲ್ಲ

೯೮ No, none ಎಂಬ ಶಬ್ದಗಳಲ್ಲಿ my, mine ಎಂಬವುಗಳಂತೆ ಭೇದವುಂಟು; ಅಂದರೆ no ದ ಮುಂದೆ ನಾಮಪದವು ಬರುತ್ತದೆ, none ದ ಮುಂದೆ ಬರುವದಿಲ್ಲ. ಉದಾ—

I have *no* papers ನನ್ನ ಹತ್ತರ ಕಾಗದ ಇಲ್ಲ.

I wish to give you some pens, but I have *none* ನಿನಗೆ ಕೆಲವು ಲೆಕ್ಕಣಿಕೆಗಳನ್ನು ಕೊಡಬೇಕೆಂದು ನನ್ನ ಮನಸ್ಸುಂಟು, ಆದರೆ ನನ್ನ ಹತ್ತರ ಒಂದೂ ಇಲ್ಲ.

೯೯ None ಎಂಬದರ ಅರ್ಥವು ಒಮ್ಮೊಮ್ಮೆ ಯಾರೂ ಇಲ್ಲ ಎಂತ ಆಗುತ್ತದೆ. ಉದಾ—

I have offended *none* ನಾನು ಯಾರನ್ನೂ ಅಸಂತೋಷಪಡಿಸಿಲ್ಲ

*None* can form an idea of this, except those who have experienced it ಇದರ ಅನುಭವ ಇದ್ದವರ ಹೊರತು ಬೇರೆ ಯಾರಿಗೂ ಇದರ ಬಗ್ಗೆ ಸ್ವಲ್ಪವಾದರೂ ತಿಳಿಯದು.

೧೦೦ Alone[1] = all + one ಒಬ್ಬನೇ ಮಾತ್ರ. ಈ ಶಬ್ದವು ನಾಮಪದದ ಇಲ್ಲವೆ ಸರ್ವನಾಮದ ಮುಂದೆ ಬರುತ್ತದೆ. ಉದಾ—

It is not good that man should be *alone* ಪುರುಷನು ಒಂಟಿಗನಾಗಿರುವದು ಒಳ್ಳೆಯದಲ್ಲ.

He *alone* can do so ಅವನೊಬ್ಬನಿಗೆ ಮಾತ್ರ ಹೀಗೆ ಮಾಡಲಿಕ್ಕೆ ಬರುತ್ತದೆ. ಅಥವಾ ಅವನೊಬ್ಬನೇ ಹೀಗೆ ಮಾಡಬಲ್ಲನು.

೧೦೧ Only[1] ಒಬ್ಬನೇ, ಒಂದೇ, ಮಾತ್ರ. ಈ ಶಬ್ದವು ನಾಮಪದದ ಇಲ್ಲವೆ ಸರ್ವನಾಮದ ಮುಂದೆ ಬರುತ್ತದೆ. ಆದರೆ ನಾಮಪದದ ಹಿಂದೆ ಉಪಪದವಾಗಲಿ, ಷಷ್ಠ್ಯಂತ ಶಬ್ದವಾಗಲಿ ಇದ್ದರೆ, only ಎಂಬ ಶಬ್ದವಾದರೂ ಬಹುತರವಾಗಿ ಹಿಂದೆ ಬರುತ್ತದೆ. ಉದಾ—

---

1) Alone ಎಂಬದು (singleness) ಏಕತ್ವ ಇಲ್ಲವೆ ಒಂಟಿಗತನವನ್ನು ತೋರಿಸುತ್ತದೆ. only (limitation) ಇಷ್ಟೇ, ಹೆಚ್ಚಿಗೆ ಇಲ್ಲ ಎಂಬದನ್ನು ತೋರಿಸುತ್ತದೆ. ಆದರೆ ಒಮ್ಮೊಮ್ಮೆ alone, only ಎಂಬ ಶಬ್ದವನ್ನು ಒಂದಕ್ಕೆ ಬದಲಾಗಿ ಮತ್ತೊಂದನ್ನು ಪ್ರಯೋಗಿಸಬಹುದು. ಉದಾ-I saw the king was *alone*, and therefore approched him ಅರಸನು ಒಬ್ಬನೇ ಇದ್ದದ್ದನ್ನು ಕಂಡು ಸಮೀಪಕ್ಕೆ ಹೋದೆನು. My pay is *only* six rupees a month ನನಗೆ ತಿಂಗಳಿಗೆ ಆರೇ ರೂಪಾಯಿ ಸಿಗುತ್ತವೆ. The king *only* [ *alone* ] can do this ಅರಸನೊಬ್ಬನೇ ಇದನ್ನು ಮಾಡಬಲ್ಲನು.

| | |
|---|---|
| Man *only* can laugh | ಮನುಷ್ಯನು ಮಾತ್ರ ನಗಬಲ್ಲನು. |
| This is the *only way* | ಇದೊಂದೇ ಮಾರ್ಗವು. |
| This is his *only son* | ಅವನಿಗೆ ಇವನೊಬ್ಬನೇ ಮಗನು. |

Only ಎಂಬ ಶಬ್ದವು ಕ್ರಿಯಾಪದಕ್ಕೆ ಸಂಬಂಧಿಸಿದ್ದರೆ, ಅದು ಕ್ರಿಯಾ ವಿಶೇಷಣವಾಗುತ್ತದೆ. ಉದಾ—

೧೦೨ Only ಎಂಬ ಶಬ್ದವನ್ನು ವಾಕ್ಯದೊಳಗೆ ಬೇರೆ ಬೇರೆ ಸ್ಥಾನಗಳಲ್ಲಿಟ್ಟ ಮೇರೆಗೆ ಆ ವಾಕ್ಯದ ಅರ್ಥವು ಬದಲಾಗುತ್ತದೆ. ಉದಾ—

He[1] *only* bought the book ಅವನೊಬ್ಬನೇ ಪುಸ್ತಕವನ್ನು ಕೊಂಡುಕೊಂಡನು[2].
He bought[1] *only* the book ಅವನು ಪುಸ್ತಕವನ್ನುಮಾತ್ರ ಕೊಂಡುಕೊಂಡನಷ್ಟೇ[3].
He bought the book[1] *only* ಅವನು ಪುಸ್ತಕವನ್ನಷ್ಟೇ ಕೊಂಡುಕೊಂಡನು[4].

೧೦೩ They ಎಂಬ ಶಬ್ದವನ್ನು ಒಮ್ಮೊಮ್ಮೆ ಸಾಮಾನ್ಯಾರ್ಥಕ ಸರ್ವನಾಮದ ತೆ ಪ್ರಯೋಗಿಸುವರು, ಆಗ ಅದರ ಅರ್ಥವು ಜನರು ಎಂತ ಆಗುತ್ತದೆ. ಉದಾ —

In Germany *they* manage things differently=
The Germans manage things differently,
ಅಥವಾ, Things are differently managed in Germany.
ಜರ್ಮನಿಯಲ್ಲಿ ಜನರು ತಮ್ಮ ಕೆಲಸಗಳನ್ನು ಬೇರೆ ರೀತಿಯಿಂದ ನಡಿಸುತ್ತಾರೆ.
ಅಥವಾ, ಜರ್ಮನಿಯಲ್ಲಿ ಕೆಲಸಗಳು ಬೇರೆ ರೀತಿಯಿಂದ ನಡೆಯುತ್ತವೆ.

## ೧೦೪ ಶಬ್ದಸಂಗ್ರಹ ೧೮.

| | | | |
|---|---|---|---|
| Pa'pal | ಪೋಪನ[5] | To ex-pound' | ವಿವರಿಸು, ಅರ್ಥಹೇಳು. |
| Mo'der-ate | ಮಿತವಾದ, ನೇಮಸ್ಥ. | An ea'gle | ಗರುಡಪಕ್ಷಿ. |
| Pros-per'ity | ಏರಿಕೆ, ಏಳ್ಗೆ, ಅಭ್ಯುದಯ, ಊರ್ಜಿತಸ್ಥಿತಿ, ಉತ್ಕರ್ಷ. | An ea'glet | ಗರುಡಪಕ್ಷಿಯ ಮರಿ. |
| A mo'tive | ಹೇತು, ಉದ್ದೇಶ. | The top | ತುದಿ, ಶಿಖರ. |

1) ಓದುವಾಗ ಈ ಶಬ್ದವನ್ನು ಒತ್ತಿ ಓದಬೇಕು. 2) ಅಂದರೆ ಎರಡನೆಯವರಾರೂ ಕೊಳ್ಳಲಿಲ್ಲ 3) ಆದರೆ ಮುಂದೆ ಅದರ ಉಪಯೋಗವನ್ನೇನೂ ಮಾಡಲಿಲ್ಲ. 4) ಮತ್ತೇನೂ ಕೊಳ್ಳಲಿಲ್ಲ. 5) ಕ್ರಿಸ್ತೀ ಧರ್ಮದಲ್ಲಿ ರೋಮನ್ ಕ್ಯಾಥೊಲಿಕ್ (Roman Catholic) ಎಂಬದೊಂದು ಮತವುಂಟು; ಆ ಮತಸ್ಥರ ಗುರುವಿಗೆ "ದಿ ಪೋಪ" (The Pope) ಅನ್ನುತ್ತಾರೆ, ಮತ್ತು ಆತನ ಪೀಠಕ್ಕೆ the Papal chair ಅನ್ನುತ್ತಾರೆ.

To ap-pre-hend' { ೧ ಹಿಡಿ, ೨ ಶಿಳ ಕೊಳ್ಳು, ೩ ಹೆದರು, ೪ ಸಂಶಯಪಡು. To de-mand' { (ಹಕ್ಕಿನಿಂದ) ಕೇಳು, ವರಾತಮಾಡು.
To store ಸಂಗ್ರಹಿಸು
(A) dan'ger { ಗಂಡಾಂತರ, ಭಯ ಕಂಟಕ. Un for'tu-nate { ಅದೃಷ್ಟಹೀನ, ಪಸಿ ಗೆಟ್ಟ, ನಿರ್ಭಾಗ್ಯ.
To re-pay ತಿರುಗಿ ಕೊಡು. A cub[1] ಕರಡಿಮರಿ, ನರಿಮರಿ.
A dis-ci'ple ಶಿಷ್ಯ, ಅನುಯಾಯಿ. Des-truc'tion ಕೇಡು, ನಾಶ.
To repeat' { ೧ ಪುನಃಮಾಡು, ೨ ಪಾಠ ಅನ್ನು, ಪುನರುಚ್ಚರಿಸು.
pro'-gress ವಿದ್ಯಾಭಿವೃದ್ಧಿ, ಅಭ್ಯಾಸ. To reg'u late { ಕ್ರಮಗೊಳಿಸು, ನಿಯಮದಿಂದನಡಿಸು.

To res-pect' one's self { ಸ್ವಾಭಿಮಾನವಿರು, ತನ್ನ ಮಾನ ತಾನು ಕಾಯ್ದುಕೊಳ್ಳು.
To ac-cus'tom one's self ಅಭ್ಯಾಸ ಮಾಡಿಕೊಳ್ಳು, ರೂಢಿ ಮಾಡಿಕೊಳ್ಳು.
To let one a-lone ಇರಗೊಡು, ಗೊಡವಿಗೆ ಹೋಗದಿರು.
The young ones ಮರಿಗಳು.
To set fire to, to set on fire ಬೆಂಕಿ ಹಚ್ಚು.
To be ter-ri-fied ಭಯಪಡು, ಬೆದರು.
A burn'ing torch ಉರಿಯುವ ದೀವಟಿಗೆ,-ಪಂಜು,-ಮಶಾಲು.
ಸುಮ್ಮನೆ ಬಡಬಡಿಸು, ಗೊತ್ತುಗೆಟ್ಟು ಮಾತಾಡು to talk non'sense.
(ಯಾವದಾದರೊಂದು) ಕೇಳು to ask for.

## ಭಾಷಾಂತರಪಾಠ ೧೮.

೧೦೫. Adrain IV[2] was the *only* Englishman that ever sat on the Papal chair. Man is the *only* animal that can laugh. To show *one's self* moderate in prosperity is a proof of the true nobility of soul. There is *nothing* wrong in respecting *ane's self*, but there is, in praising *one's self*. My father has both a gold watch and a silver one. It is better not to search for motives, where bad *ones* are likely to be found. Many people apprehend danger, where is *none*. It is difficult to accustom *one's self* to the habits of a foreign country,

1) ಈ ಶಬ್ದವನ್ನು ಕರಡಿ, ನರಿ ಮುಂತಾದ ಹಲವು ಮೃಗಗಳ ಮರಿಗಳಿಗೆ ಮಾತ್ರ ಹಚ್ಚುತ್ತಾರೆ. ಬೇರೆ ಕೆಲವು ಮೃಗಗಗಳಿಗೆ ಸ್ವತಂತ್ರ ಶಬ್ದಗಳುಂಟು. ಸಾಧಾರಣವಾಗಿ young one ಎಂಬ ಶಬ್ದವು ಯಾವತ್ತೂ ಮರಿಗಳಿಗೆ ಹತ್ತುತ್ತದೆ. 2) Adrian the fourth ಎಂತ ಓದು; ಇದರ ಅರ್ಥವು ನಾಲ್ಕನೇ ಏಡ್ರಿಯನ್.

*One* sees the faults of others sooner than *one's* own. What a dreadful thing it is to see *one's self* forsaken by *one's* best friends! To love *one's* native country is *one's* sacred[1] duty. *One* must constantly repeat *one's* lessons if one wishes to make progress. All our actions should be regulated by religion and reason[2]. Will you be kind enough to lend me your India rubber? He ought to have repaid the money long ago. I was obliged to stay at home. You must have been asleep. We were obliged to wait for him more than half an hour. We should think more of our duties and less of our pleasures. This boy has got itch[3] on his hands. When they were *alone* he expounded all things to his disciples. Let me be *alone*. Let them be *alone*. Let it be *alone*. This is their *only* child. Rama was the *only* man present on the occasion. We generally have plenty of rain during the rainy season but this year we have had *none*. He wants rest, but gets *none*. *One* day an eagle carried off some young foxes and brought them to her nest to feed her eaglets. The unfortunate fox demanded back her cubs in vain. The eagle refused to listen because her nest was on the top of a lofty tree. The fox brought a burning torch, with which she set fire to the tree. The eagle was terrified and returned the cubs to the fox. In this way she saved her own *young ones* from destruction.

ನಮ್ಮ ಕುದುರೆಯು ನಿನ್ನೆ ಸಾಯಂಕಾಲಕ್ಕೆ ಸತ್ತಿತು; ಇನ್ನು ನಾವು ಹೊಸದೊಂದು ಕೊಳ್ಳಬೇಕಾಗುವದು. ನಿನ್ನ ಅಂಗಿಗಳೆಲ್ಲ ಹರಿದವೆ. ಉಳಿದ ಯಾವತ್ತು ಹುಡುಗರ ಹತ್ತರ ಸ್ವಲ್ಪ ಹಣ ಇತ್ತು; ಆದರೆ ರಾಮಚಂದ್ರನ ಕಿಸೆಯೊಳಗೆ ಏನೂ ಇದ್ದಿಲ್ಲ. ಅವನೊಬ್ಬನೇ ಇಂಥ ಕೆಲಸ ಮಾಡಬಲ್ಲನು. ನಿನಗೊಬ್ಬನಿಗೆ ಮಾತ್ರ ಇಂಥ ಕೆಲಸಗಳು ಸಾಧಿಸುವವು. ಕೆಲವು ಹುಡುಗರು ಆಡುತ್ತಿದ್ದರು, ಉಳಿದವರು ತಮ್ಮ ಪಾಠವನ್ನು ಮಾಡುತ್ತಿದ್ದರು. ಪ್ರತಿ ಒಬ್ಬರಿಗೆ

1) ತಪ್ಪಿಸಕೂಡದಂಥ, ಅಲಂಘನೀಯ. 2) ನಾವು ಮಾಡುವ ಕೃತ್ಯಗಳೆಲ್ಲ ಧರ್ಮಕ್ಕೂ ವಿಚಾರಶಕ್ತಿಗೂ ಅನುಸಾರವಾಗಿ ಇರಬೇಕು. 3) ಇಲ್ಲಿ *itches* ಅನ್ನುವದು ತಪ್ಪು.

ತಮ್ಮ ದೋಷಗಳು ಗೊತ್ತಿರಬೇಕು. ಇದಕ್ಕಿಂತ ಹೆಚ್ಚಿನದು ನಮ್ಮಿಂದ ಏನಾದೀತು? ಮಾರ್ಗದಲ್ಲಿ ನಮಗೆ ಬಹಳ ಮಂದಿ ಭೆಟ್ಟಿಯಾದರು[1]. ಅವರು ಈ ಮಾತಿನ ವಿಷಯಕ್ಕೆ ನಮಗೆ ಬಹಳ ಕೇಳಿದರು. ನೀನು ಇಂಥ ಗೊತ್ತುಗೆಟ್ಟ ಮಾತು ಆಡುವದನ್ನು ನೋಡಿ ಯಾರಾದರೂ (ಒಂದುವೇಳೆ) ನೀನು ಹುಚ್ಚನೆಂದು ತಿಳಿದುಕೊಳ್ಳುವರು. ಇಂಥ ಸಮಯದಲ್ಲಿ ನೀನು ಅವನ ಭೆಟ್ಟಿಗೆ ಹೋಗತಕ್ಕದ್ದಿತ್ತು. ಅವನು ನನಗೆ ಬಹಳ ಹೇಳಿದನೆಂಬದು ನಿಜವು; ಆದರೆ ಅವನಿಗೆ ಇನ್ನೂ ಬಹಳ ಗೊತ್ತಿತ್ತೆಂದು ನನಗೆ ತೋರುತ್ತದೆ. ಈ ರೀತಿಯಿಂದ ನಡೆಯಲಿಕ್ಕೆ ನಿನಗೆ ಮತ್ತೇನು ಬೇಕಾಗಿತ್ತು? ಕಂಡದ್ದನ್ನಾಡಿದರೆ ಕೆಂಡದಂಥ ಸಿಟ್ಟು[2]. ತಮಗೆ ತೋಚಿದ್ದನ್ನೆಲ್ಲ ತಾವು ಯಾವಾಗಲೂ ಆಡಿ ತೋರಿಸತಕ್ಕದ್ದಲ್ಲ. ನಾನು ಅವನ ಭೆಟ್ಟಿಗೆ ಹೋದಾಗ ಅವನು ಮನೆಯಲ್ಲಿದ್ದಂತೆ ತೋರಲಿಲ್ಲ. ಕೆಲವರ ಅಭಿಪ್ರಾಯವು ಹೀಗೆ ಇತ್ತು. ಆದರೆ ಉಳಿದವರದು ಬೇರೆ ಇತ್ತು. ಮೊದಲು ನನ್ನ ಪ್ರಶ್ನೆಗೆ ಉತ್ತರ ಕೊಡು. ಒಂದೇ ಅಭಿಪ್ರಾಯದವರು ಎಷ್ಟು ಮಂದಿ ಇದ್ದರು?

ಒಬ್ಬರಿಗೆ ಒಂದು ಸೇರುತ್ತದೆ. ಮತ್ತೊಬ್ಬರಿಗೆ ಮತ್ತೊಂದು ಸೇರುತ್ತದೆ, ನಾವು ನಿಮ್ಮ ಸಂಗಡ ಬರಬಹುದೋ? ಹೌದು, ಬೇಕಾದರೆ ಬರಬಹುದು. ಬಹಳ ಮಂದಿ ಹೀಗೆ ಮಾಡತಕ್ಕದ್ದಿತ್ತು. ಅವನು ನನಗೆ ಬಹಳ ಸಹಾಯ ಮಾಡತಕ್ಕದ್ದಿತ್ತು; ಆದರೆ ಅವನು ಏನೂ ಸಹಾಯ ಮಾಡಲಿಲ್ಲ. ನಾನು ಅವನ ಹತ್ತರ ಸ್ವಲ್ಪ ಹಣ ಬೇಡಿದೆನು, ಆದರೆ ಅವನ ಹತ್ತರ ಕೊಡಲಿಕ್ಕೆ ಹಣವೇ ಇದ್ದಿಲ್ಲ[3]. ಇಂಥಾ ಬರವನ್ನು ನಾವು ಮೊದಲು ಎಂದೂ ನೋಡಲಿಲ್ಲ. ಅವನ ಹತ್ತರ ಕಡಾ ಕೊಡಲಿಕ್ಕೆ ಹಣವಿದ್ದಿಲ್ಲ. ನಿಮ್ಮ ನೆರೆಹೊರೆಯಲ್ಲಿ ಬಾಡಿಗೆಯ ಮನೆ ಯಾವದಾದರೂ ಉಂಟೋ? ಕೆಲವು ದಿವಸಗಳ ಹಿಂದೆ ಒಂದು ಇತ್ತು, ಆದರೆ ಈಗ ಇಲ್ಲ. ಅವನು ಎಷ್ಟೋ ಮಾವಿನ ಹಣ್ಣುಗಳನ್ನು ಕೊಂಡುಕೊಂಡನಷ್ಟೇ ಸರಿ; ಆದರೆ ಒಂದು ಸಹ ತಿನ್ನಲಿಲ್ಲ. ಈ ಪುಸ್ತಕಗಳಲ್ಲಿ ಯಾವ ಪುಸ್ತಕವು ನಿನಗೆ ಓದಲಿಕ್ಕೆ ಬೇಕು? ಯಾವದಾದರೂ ಕೊಡು. ಎರಡನೇಯವರ ನ್ಯೂನತೆಗಳನ್ನು ಕಂಡು ಯಾರೂ ನಗಬಾರದು. ಒಂದುವೇಳೆ ತಮ್ಮಲ್ಲಿ ಅವೇ ನ್ಯೂನತೆಗಳಿರಬಹುದು[4]. ಯಾರಿಗಾದರೂ ತಮ್ಮ ದೋಷಗಳು ತಮಗೆ ಯಾವಾಗಲೂ ಗೊತ್ತಿರುತ್ತವೆಂದು

1) We saw. 2) Grievous words stir up anger, or True jests breed bad blood. 3) I asked for some money, but he had none to give. 4) We may have the some failings, or There may be the same failings in us.

ಹೇಳಕೂಡದು. ನಾವು ಯಾವಾಗಲೂ ತಮ್ಮ ಕರ್ತವ್ಯಕರ್ಮದ ಕಡೆಗೆ ಲಕ್ಷ್ಯ ಕೊಡಬೇಕು. ನಾವು ಹೇಳಿದ ಬುದ್ಧೀ ಮಾತು ಅವನೊಬ್ಬನೇ ಕೇಳಿದನು.

## ೧೪ ನೇ ಪಾಠ.

### ಸಾಮಾನ್ಯಾರ್ಥಕ ಸರ್ವನಾಮುಗಳ ಸಂಯೋಗವು.

### The combination of Indefinite pronouns.

೧೦೬ **One** ಎಂಬದು ಅನ್ಯ ಸರ್ವನಾಮುಗಳನ್ನು ಕೂಡಿಕೊಂಡು ಆಗುವ ಸಂಯೋಗಗಳು-no one ಯಾರೂ ಇಲ್ಲ; some one ಯಾವನಾದರೊಬ್ಬ; any one ಯಾರಾದರೂ; each one (ಇಬ್ಬರಲ್ಲಿ) ಪ್ರತಿ ಒಬ್ಬ; another one ಮತ್ತೊಬ್ಬ; the other one (ಇಬ್ಬರಲ್ಲಿ) ಮತ್ತೊಬ್ಬ, ಎರಡನೇಯವ; such a one ಇಂಥಾದ್ದು; such and such a one ಇಂಥವ, ಫಲಾಣಿ (ಮುಂತಾದವುಗಳು).

One by one ಒಬ್ಬೊಬ್ಬರು, ಒಬ್ಬರ ಹಿಂದೊಬ್ಬರು.

೧೦೭ **Thing** ಎಂಬ ಶಬ್ದವನ್ನು every, some, any, no ಎಂಬ ಶಬ್ದಗಳಿಗೆ ಒಮ್ಮೊಮ್ಮೆ ಕೂಡಿಸುವರು. Everything ಎಲ್ಲಾ; something ಒಂದಿಷ್ಟು, ಏನಾದರೂ; anything ಯಾವದಾದರೊಂದು, ಏನಾದರೂ; nothing ಏನೂ ಇಲ್ಲ. — ಈ ಶಬ್ದಗಳಿಗೆ ವಿಶೇಷಣವು ಬೇಕಾದರೆ, ಅದು ಬಹುತರ ಅವುಗಳ ಮುಂದೆ ಬರುತ್ತದೆ. ಉದಾ—

There is *nothing* wonderful in this ಇದರೊಳಗೆ ಸೋಜಿಗವಾದ್ದೇನೂ ಇಲ್ಲ.

*Anything* good ಚಲೋದೇನಾದರೂ.

ಆದರೆ, *Any* good *thing* ಯಾವದಾದರೂ ಚಲೋ ವಸ್ತು.

೧೦೮ **Body** ಎಂಬ ಶಬ್ದದ ರೂಢಿಯ ಅರ್ಥವು ಶರೀರ. ಆದರೆ ಈ ಶಬ್ದವನ್ನು every, some, any, no ಎಂಬವುಗಳಿಗೆ ಕೂಡಿಸಿದರೆ, ಅದರ ಅರ್ಥವು ಮನುಷ್ಯ, ಜನ ಎಂತ ಆಗುತ್ತದೆ. Everybody ಪ್ರತಿ ಒಬ

ಮನುಷ್ಯ, ಎಲ್ಲರೂ; somebody ಯಾವನಾದರೊಬ್ಬ ಮನುಷ್ಯ[1]; any body ಯಾವನಾದರೂ[2]; nobody ಯಾರೂ ಇಲ್ಲ

೧೧೯ Where ಎಂಬ ಶಬ್ದವನ್ನು every, some, any, no ಎಂಬ ಶಬ್ದಗಳಿಗೆ ಕೂಡಿಸುವರು. Everywhere ಎಲ್ಲಿ ನೋಡಿದರೂ, ಎಲ್ಲ ಕಡೆಯಲ್ಲಿಯೂ; somewhere ಎಲ್ಲಿಯೋ; anywhere ಎಲ್ಲಿಯಾದರೂ; nowhere ಎಲ್ಲಿಯೂ ಇಲ್ಲ.

೧೨೦ How ಹೇಗೆ; somehow ಒಂದಿಲ್ಲೊಂದು ರೀತಿಯಿಂದ, ಹೇಗಾದರೂ ಮಾಡಿ; anyhow ಹೇಗಾದರೂ.

೧೨೧ Some one or other=somebody or other ಯಾರಾದರೂ ಒಬ್ಬರು; something or other ಏನಾದರೂ ಒಂದು; some-where or other ಎಲ್ಲಿಯಾದರೂ; somehow or other ಹೇಗಾದರೂ ಮಾಡಿ; somewhat ಸ್ವಲ್ಪ, ಅಲ್ಪಸ್ವಲ್ಪ. ಉದಾ—

It has *somewhat* brackish test ಅದು ಸ್ವಲ್ಪ ಸೌಳು ಹತ್ತುತ್ತದೆ.

He is *somewhat* disappointed ಅವನ ಆಶೆ ಸ್ವಲ್ಪ ಭಂಗವಾಗಿದೆ, ಅಥವಾ ಅವನು ಸ್ವಲ್ಪ ನಿರಾಶನಾಗಿದ್ದಾನೆ.

Sometimes ಒಮ್ಮೊಮ್ಮೆ.

೧೨೨ Some, all, many, few ಎಂಬ ಶಬ್ದಗಳು ಬೇರೆ ಸರ್ವನಾಮಗಳ ಮತ್ತು ವಿಶೇಷಣಗಳ ಹಿಂದೆ ಬರುತ್ತವೆ; ಮುಂದೆ ಬರುವದಿಲ್ಲ. ಉದಾ—

It happened in *some such* manner ಇಂಥ ಯಾವದೋ ಒಂದು ರೀತಿಯಿಂದ ಅದು ಸಂಭವಿಸಿತು.

| | |
|---|---|
| *Some other* plants | ಬೇರೆ ಕೆಲವು ವನಸ್ಪತಿಗಳು. |
| *All these boys* | ಈ ಯಾವತ್ತೂ ಹುಡುಗರು. |
| *All my* exercises | ನನ್ನ ಯಾವತ್ತು ಪಾಠಗಳು. |
| *Many other* countries | ಬೇರೆ ಅನೇಕ ದೇಶಗಳು. |
| *A few other* things | ಬೇರೆ ಕೆಲವು ಸಂಗತಿಗಳು. |

1) ಒಬ್ಬ one ಉದಾ:-ನಿಮ್ಮೊಳಗೆ ಒಬ್ಬ one of you. 2) Any one ಎಂಬ ಶಬ್ದವನ್ನು ಮೂರೂ ಲಿಂಗಗಳಲ್ಲಿ ಪ್ರಯೋಗಿಸಬಹುದು; ಹೇಗಂದರೆ:-I have bought several umbrellas. you may take *any one* of them: All the girls have read the book; you may examine *any one* you like; *Any one* of those men can go there.

೧೧೩ More ಎಂಬ ಶಬ್ದವು one, what, many, some, any, no ಮುಂತಾದ ಶಬ್ದಗಳ ಮುಂದೆ ಬರುವದು. ಉದಾ—

| | |
|---|---|
| Many *more* | ಇನ್ನೂ ಬಹಳ. |
| Some *more* | ಇನ್ನೂ ಕೆಲವು. |

More ಎಂಬ ಶಬ್ದಕ್ಕೆ ಹೊಂದಿ ಹಿಂದೆ not ಎಂಬ ಶಬ್ದವು ಬಂದರೆ ಅದಕ್ಕೆ ಬದಲಾಗಿ no ಎಂಬ ಶಬ್ದವು ಸಹ ಬರುವದು.

No more ಎಂಬದು ಒಮ್ಮೊಮ್ಮೆ ವಿಶೇಷಣವಿದ್ದಾಗ ಆದರ ಅರ್ಥವು ಜೀವ ಹೋದ, ಸತ್ತ ಎಂತ ಆಗುತ್ತದೆ. ಉದಾ—

My brother is no *more* ನನ್ನ ಅಣ್ಣನು ಸತ್ತಿದ್ದಾನೆ.

Some six years ago or *more* ಸುಮಾರು ಆರು ಅಥವಾ ಅದಕ್ಕೂ ಹೆಚ್ಚು ವರ್ಷಗಳ ಹಿಂದೆ.

For three hours and *more* ಮೂರು ತಾಸುಗಳಿಗಿಂತ ಹೆಚ್ಚು.

೧೧೪ Each other ಮತ್ತು one another ಎಂಬವುಗಳ ಅರ್ಥವು ಒಬ್ಬರಿಗೊಬ್ಬರು, ಪರಸ್ಪರ ಎಂತ ಆಗುತ್ತದೆ.

Each other ಎಂಬವು ಇಬ್ಬರನ್ನು ಮಾತ್ರ ಸೂಚಿಸುತ್ತದೆ[1]; one another ಎಂಬದು ಇಬ್ಬರಿಗಿಂತ ಹೆಚ್ಚು ಜನರನ್ನು ಸೂಚಿಸುತ್ತದೆ. ಉದಾ—

They love *each* other[2] ಅವರು ( ಇಬ್ಬರು ) ಒಬ್ಬರ ಮೇಲೊಬ್ಬರು ಪ್ರೀತಿ ಮಾಡುತ್ತಾರೆ.

They love *one another* ಅವರು ಒಬ್ಬರಮೇಲೊಬ್ಬರು ಪ್ರೀತಿ ಮಾಢುತ್ತಾರೆ.

೧೧೫ Such and such ಇಂಥ, ಇಂಥಿಂಥ, ಫಲಾಣಿ. ಉದಾ—

| | |
|---|---|
| *Such* and *such* a man | ಇಂಥಾ ಮನುಷ್ಯ. |
| *Such* and *such* reasons | ಇಂಥಿಂಥ ಕಾರಣಗಳು. |

1) ಈ ನಿಯಮವನ್ನು ಎಡೆಬಿಡದೆ ಅನುಸರಿಸುತ್ತಾರೆಂದು ಹೇಳಕೊಡ್ಡದು.
2) ಅಂದರೆ, *They each* love the other ಅವರೊಳಗಿನ ಪ್ರತಿ ಒಬ್ಬನು ಮತ್ತೊಬ್ಬನ ಮೇಲೆ ಪ್ರೀತಿ ಮಾಡುತ್ತಾನೆ.

## ೧೧೬ ಶಬ್ದಸಂಗ್ರಹ ೧೯.

| | | | |
|---|---|---|---|
| Ed-u-ca'tion-al | ಶಾಲಾಖಾತೆಯ, ವಿದ್ಯಾಖಾತೆಯ, | To pelt | ಹೊಡೆ, ಒಗೆ, ಎಸೆ. |
| An in-spect'or | ಪರೀಕ್ಷಕ, ಮೇಲ್ವಿಚಾರಕ. | A snow'ball | ಹಿಮದ ಕರಡೆ. |
| Dis-a-gree'able | ಅಪ್ರಿಯ,ಸರಿಬಾರದ. | To men'tion | (ಆಕಸ್ಮಾತ್ತಾಗಿ) ತಿಳಿಸು. ಸ್ವಲ್ಪ ಹೇಳು. |
| Cheer'ful-ly | ಸಂತೋಷದಿಂಡ, ಉಲ್ಲಾಸದಿಂದ. | Leak | ಒಸರು, ಸೋರು. |
| Loyal-ty | ಸ್ವಾಮಿಭಕ್ತಿ,ರಾಜನಿಷ್ಠೆ. | In'so-lent | ಸೊಕ್ಕಿನ, ಉದ್ದಾಮ, ಉದ್ಧಟ. |
| ಫಿರ್ಯಾದಿ, ದೂರು | a complaint'. | ಬುದ್ಧೀಮಾತು, ಆಲೋಚನೆ, ಉಪದೇಶ | ad-vice', coun'sel. |
| ಜಾತಕ | a hor'o-scope. | ಜೀನ, ಜಿಪುಣ, ಕೃಪಣ | stin'gy. |

To be at an end — ತೀರು, ಮುಗಿ, ಕಡೆಗಾಣು.
To be sat'isfied — ಸಮಾಧಾನಪಡು.
To my knowl'edge — ನನಗೆ ತಿಳಿದಷ್ಟು.
As for as I know — ನನಗೆ ಗೊತ್ತಿದ್ದ ಮಟ್ಟಿಗೆ.
To in-quire' for or af'ter one — ಒಬ್ಬರನ್ನು ಕುರಿತು ಕೇಳು,— ವಿಚಾರಿಸು, ಸಮಾಚಾರ ತಕ್ಕೊಳ್ಳು.
To know for certain — ನಿಶ್ಚಯವಾಗಿ ಗೊತ್ತಿರು.
To turn aw-ay' — ಚಾಕರಿಯಿಂದ ತೆಗೆದು ಹಾಕು.

ಬಂಡೀ ಬಾಡಿಗೆ ಮಾಡು — to hire a cart.
ಹೊತ್ತುಗಳೆ — to pass or to spend (one's) time.
ಈ ರೀತಿಯಿಂದ, ಈ ಪ್ರಕಾರ — thus, in this man'ner.
ಎಷ್ಟು ಗಂಟೆಗೆ? ಎಷ್ಟು ಬಡಿಯುತ್ತಲೆ? — When ? at what hour ?
ಏನು ಕೆಲಸದ್ದು? — of what use?
ಒಬ್ಬನಿಗೆ ನೆನಪು ಕೊಡು,—ಮಾಡು — to re-mind' a man (of).
ಬಿನ್ನಹ ಅಮಾನ್ಯ ಮಾಡು — to refuse' one's requst'.
ಮನಸ್ಸಿರು, ಉದ್ದೇಶವಿರು — to wish, to in-tend', to mean, to have a mind to.

## ಭಾಷಾಂತರಪಾಠ ೧೯.

೧೧೭ The children were examined orally by the Educational Inspector *one by one.* Who is to fetch the letter? One bears disagreeable thing more cheerfully, if one knows that they will soon be at an end. I know all, My brother has told me *everything.* I feel sure that you will not mention it to *any one.* I have shown you *everything* now, are you satisfied? He has done *nothing* at all the whole morning. *Something* must be done. He is so well known in this neighbourhood that *anybody* can tell you where he lives. The boys were pelting *one another* with snow balls all the morning. Has *anybody* called here this morning? No sir, *no one* has been here to my knowledge (or, as far as I know). Yes, sir, *somebody* has been here inquiring for you; but when he found that you were not at home, he went away. He did not give his name. *Nobody* can know for certain how it will turn[1], but *everyone* fears a bad result. If you do not behave well, I shall turn[2] you out. My old servant was *somewhat* insolent: I had at last to turn him away. He has *no* other coat except the one which he wears every day. The poor orphans are crying for bread. He went to America country to the wishes of his relations and friends.

ನಾನು ನಿನ್ನ ಬಿನ್ನಹವನ್ನು ಅಮಾನ್ಯ ಮಾಡುವದು ಆವಶ್ಯವದೆ. ನಾನು ಬಂಡೀ ಬಾಡಿಗೆ ಮಾಡಬೇಕಾಯಿತು. ನಾವು ಸತ್ಯ ಮಾತಾಡಲಿಕ್ಕೆ ಬೇಕು. ಅವನ ಮನಸ್ಸು ಮನೆ ಮಾರಿಕೊಳ್ಳುವಧದೆ. ನನ್ನ ಮನಸ್ಸಿನೊಳಗೆ ಪುಣೆಗೆ ಹೋಗತಕ್ಕದ್ದದೆ. ಈ ರೀತಿಯಿಂದ ನೀನು ಹೊತ್ತುಗಳೆಯಬಾರದು, ನಿನಗೆ ಎಷ್ಟು ಬೇಕು? ಒಮ್ಮೊಮ್ಮೆ ಅವನು ಬೆಳಗ್ಗೆ ನಾಲ್ಕು ಗಂಟೆಗೆ ಏಳುತ್ತಾನೆ. ನೀನು ಎಷ್ಟು ಗಂಟೆಗೆ ಮಲಗುತ್ತೀ? ಈ ಮೇರೆಗೆ ದೂರಿಕೊಳ್ಳುವದು ಏನು ಪ್ರಯೋಜನ? ಈ ಶಬ್ದಗಳ ಅರ್ಥವೇನು? ಒಳ್ಳೇ ನಡತೆಯ ಬಗ್ಗೆ ನಮಗೆ ಇನಾಮು ಸಿಗತಕ್ಕದ್ದಿತ್ತು. ಒಂದುವೇಳೆ ನೀನು ಅದನ್ನು ಮರೆತಿರಲಿಕ್ಕಿಲ್ಲ, ನಾನು

1) Turn out ಪರಿಣಮಿಸು, ಆಗು. 2) Turn out ಹೊರಗೆ ಹಾಕು, ತೆಗೆದು ಹಾಕು.

ನಿನಗೆ ಅದರ ಬಗ್ಗೆ ಸ್ವಲ್ಪ ನಿಮಿಷಗಳ ಮುಂಚೆಯೇ[1] ನೆನಪು ಮಾಡಿದೆನು. ನೀನು ಹೀಗೆ ಮಾಡುವದು ತಕ್ಕದ್ದಲ್ಲ. ಆ ಹುಡುಗರೆಲ್ಲರು ನಿಚ್ಚಣಿಕೆಯ ಮೇಲೆ ಏರಿದರು. ಇವನ್ನು ಯಾರು ಮಾಡಿರಬಹುದು[2]? (ಒಂದು ವೇಳೆ) ಅದನ್ನು ರಾಮನು ಮಾಡಿರಬಹುದು. ಇಷ್ಟು ಭಾರೀ ಕ್ರಯಕ್ಕೆ[3] ಈ ಕಪಾಟನ್ನು ನೀವು ಕೊಂಡುಕೊಳ್ಳತಕ್ಕದ್ದಿದ್ದಿಲ್ಲ. ನಿಮ್ಮ ಹಣಾ ಮುಂದಿನ ತಿಂಗಳಿಗೆ ತಿರುಗಿ ಕೊಡ ಬೇಕೆಂದು ನನ್ನ ಆಲೋಚನೆಯುಂಟು. ನೀನು ಆ ಪುಸ್ತಕವನ್ನು ಅಂದೇ[4] ತಿರುಗಿ ಕೊಡತಕ್ಕದ್ದಿತ್ತು. ಅವನು ಅದನ್ನು ವರ್ತಮಾನಪತ್ರದಲ್ಲಿ ಓದಿದನು. ನಿನ್ನ ಯೋಚನೆಯಂತೆ ನಡೆಯಬೇಕೆಂದು[5] ನನ್ನ ಮನಸ್ಸುಂಟು. ನಿನ್ನ ಯೋಚನೆಯಂತೆ ನಡೆಯಲಿಕ್ಕೆ ನಾನು ಸಿದ್ಧನಿದ್ದೇನೆ. ಇಂಥ ಕೆಲಸ ನೀನು ಮಾಡುವದು ವಿಲಕ್ಷಣವಾದದ್ದು. ಆ ಕಾಲಕ್ಕೆ ಬಹಳ ಚಳಿ ಬಿದ್ದಿರಬೇಕು[6].

## ೧೧೮ ಶಬ್ದಸಂಗ್ರಹ ೨೦

| | | | |
|---|---|---|---|
| To part | ಅಗಲು. | When-ever | ಯಾವಾಗಲಾದರೂ. |
| To wage war | ಯುದ್ಧ ನಡಿಸು. | To bring for'ward an excuse | ನೆವ ಹೇಳು. |
| | | To be of no-avail | ವ್ಯರ್ಥವಾಗು. |
| Re-spec'tive | ತಮ್ಮ ತಮ್ಮ. | A con-sid er-a'tion | ಆಲೋಚನೆ, ವಿಚಾರ. |
| Ac-cord'ing to | ಅಂತೆ, ಪ್ರಕಾರ. | To im-prove' | ತಿದ್ದು, ಸುಧಾರಿಸು. |
| To re-sem'ble | ಹೋಲು. | To bet'ter | ಗುಣಮಾಡು, ವೃದ್ಧಿಗೊಳಿಸು. |

## ಭಾಷಾಂತರಪಾಠ ೨೦.

೧೧೯ According to his promise he must return to-day. I wished to buy an umbrella, but I had not money enough with me. This boy is *somewhat* careless. Let us sit down under this tree and tell stories to *one another*. We must part for the present, but I hope that we shall soon see *each other* again. When princes are waging war with *each other* their subjects are obliged to murder and kill *one another*. Those boys resemble *each other* very much. *Each one* of you must attend to your respective duty. When I

1) Only, just. 2) Can have done. 3) at so high (ಅಥವಾ) at such (at high) price. 4) Long ago. 5) To be guided by you (ಅಥವಾ) by your advice, to follow your advice, to adopt your counsel. 6) It must have been very cold at that time.

went into the house, there was *no one* to be seen. Whenever I tell him to do *such and such* a thing, he always brings forward *some* excuse or *other*. This is a fine umbrella, I wish to have one like it. He tried much to improve his conditions but all his efforts were of no avail. Leave all *other* considerations aside and follow my advice in this matter. Rama, Hari and Govinda were there and there were a *few others*. *Some* four years ago *or more*, it so happened that we parted and we have never seen *each other* since. Do not speak *one* word *more*. I heard *no more*. He is *no more*. He called at my house on *such* a day and I gave *such and such* an answer to his questions.

ಈಗ ಪುಣೆಯಲ್ಲಿ ಬಹಳ ಚಳಿ ಬಿದ್ದಿರಬೇಕು[1]. ನಾನು ನಿನ್ನೆ ಸಾಯಂಕಾಲಕ್ಕೆ ನಿನಗೆ ತೋಟದೊಳಗಿನ ಗಿಡಗಳಿಗೆ ನೀರು ಹಾಕಲಿಕ್ಕೆ ಹೇಳಿದ್ದೆನು[2]. ನೀನು ಯಾಕೆ ಹಾಕಲಿಲ್ಲ? ನನಗೆ ಹೀಗೆ ತೋರುತ್ತದೆ, ಆದರೆ ನಿಶ್ಚಯವಾಗಿ ಗೊತ್ತಿಲ್ಲ. ನಿಮಗೆ ಇದು ನಿಜವಾಗಿ ಗೊತ್ತದೆಯೋ? ಅಣ್ಣತಮ್ಮಂದಿರೂ ಅಕ್ಕತಂಗಿಯರೂ ಒಬ್ಬರ ಮೇಲೊಬ್ಬರು ಪ್ರೀತಿ ಮಾಡತಕ್ಕದ್ದು. ಅವನು ಹೇಳಿದ್ದಕ್ಕಿಂತ ಅವನಿಗೆ ಇನ್ನೂ ಹೆಚ್ಚಿಗೆ ಗೊತ್ತಿತ್ತು. ಇಂಥಾ ನೆವಗಳನ್ನು ಇನ್ನು ಮೇಲೆ ಎಂದೂ ಹೇಳಬೇಡ. ಇದು ಸಾಕಾಯಿತು; ನನಗೆ ಇನ್ನೇನೂ ಕೇಳಬೇಕೆಂಬುವ ಇಚ್ಛೆ ಇಲ್ಲ. ನಾನು ಇಷ್ಟೇ ಕೇಳಿದೆನು; ಹೆಚ್ಚಿಗೇನೂ ಕೇಳಲಿಲ್ಲ. ನಾನು ಮನೆಯೊಳಗೆ ಹೋದೆನು, ಆದರೆ ಅಲ್ಲಿ ಒಬ್ಬರೂ ಇದ್ದಿಲ್ಲ. ನಿಮ್ಮೊಳಗಿನ ಪ್ರತಿ ಒಬ್ಬನು ಸಾಲೆಗೆ ತನ್ನ ಪುಸ್ತಕವನ್ನು ತರಲಿಕ್ಕೆ ಬೇಕು. ನಿಮ್ಮ ಮಕ್ಕಳಲ್ಲಿ ಒಬ್ಬನು ಶಾಲೆಯಲ್ಲಿದ್ದನು. ಆದರೆ ಮತ್ತೊಬ್ಬನು ಅಲ್ಲಿ ಕಾಣಲಿಲ್ಲ. ನಾನು ಇಲ್ಲದಾಗ ಯಾರಾದರೂ ನನ್ನನ್ನು ಕೇಳುತ್ತಾ ಬಂದಿದ್ದರೋ? ಹೌದು ಸ್ವಾಮೀ, ಇಲ್ಲಿಗೆ ಒಬ್ಬರು ಬಂದಿದ್ದರು[3]. ಇಲ್ಲ, ಸ್ವಾಮೀ ಇಲ್ಲಿ ಯಾರೂ ಬಂದಿದ್ದಿಲ್ಲ. ನಾನು ಏನಾದರೂ ಮಾಡಲಿಕ್ಕೆ ಬೇಕು. ಅವನಿಗೆ ಅದರ ವಿಷಯಕ್ಕೆ ಏನೂ ಗೊತ್ತಿಲ್ಲ. ನಿನಗೇನಾದರೂ ಗೊತ್ತುಂಟೋ? ಪ್ರತಿ ಒಬ್ಬನು ಹಾಗೆ ಅನ್ನುತ್ತಾನೆ. ನಾನು ನಿಮ್ಮೊಳಗಿನವನೊಬ್ಬನನ್ನು ಶಿಕ್ಷಿಸಲಿಕ್ಕೇ ಬೇಕು. ಅವನು ಎಲ್ಲಿಯಾದರೂ ಇದ್ದಾನು. ಯಾರಾದರೂ ಅವನಿಗೆ ಈ ವಿಷಯದಲ್ಲಿ ವರ್ತಮಾನ ತಿಳಿಸಬೇಕು. ಒಳ್ಳೇ ಮನುಷ್ಯನಿಗೆ ಎಲ್ಲಿಯಾದರೂ ಸ್ನೇಹಿತರುಂಟು.

1) It must be very cold now at Poona. 2) ಬರೇ ಭೂತಕಾಲ ಹಾಕು.
3) Was ಅಥವಾ had come.

## ೧೪ ನೇ ಪಾಠ.

## ಸಾಮಾನ್ಯಾರ್ಥಕ ಸರ್ವನಾಮಗಳದು ಕ್ರಿಯಾವಿಶೇಷಣಾವ್ಯಯಗಳಂತೆ ಪ್ರಯೋಗವು.

## Indefinite pronouns used as adverbs.

೧೩೦ ಸಾಮಾನ್ಯಾರ್ಥಕ ಸರ್ವನಾಮಗಳಲ್ಲಿ each, every, either, neither, many, few, several ಎಂಬವು ಸಂಖ್ಯೆಯನ್ನು ಮಾತ್ರ ತೋರಿಸುತ್ತವೆ. all, no, none, some, any, enough ಎಂಬವು ಒಮ್ಮೊಮ್ಮೆ ಸಂಖ್ಯೆಯನ್ನೂ, ಒಮ್ಮೊಮ್ಮೆ ಪರಿಮಾಣವನ್ನೂ ತೋರಿಸುತ್ತವೆ.

೧೩೧ ಪರಿಮಾಣ ತೋರಿಸುವ ಸಾಮಾನ್ಯಾರ್ಥಕ ಸರ್ವನಾಮಗಳು ಎರಡರಲ್ಲಿ ಒಂದು ವ್ಯಕ್ತಿಯ ಗುಣಾಧಿಕ್ಯವನ್ನು ತೋರಿಸುವ ವಿಶೇಷಣಕ್ಕೆ ಸಂಬಂಧಿಸಿರಲಾಗಿ, ಅವುಗಳ ಪ್ರಯೋಗವು ಕ್ರಿಯಾವಿಶೇಷಣಾವ್ಯಯಗಳಂತೆ ಆಗುತ್ತದೆ[1], ಮತ್ತು ಅವು ಎಷ್ಟರಮಟ್ಟಿಗೆ ಎಂಬ ಅರ್ಥವನ್ನು ಸೂಚಿಸುತ್ತವೆ.

೧೩೨ ಕ್ರಿಯಾವಿಶೇಷಣಾವ್ಯಯಗಳಿದ್ದಾಗ all[2] ಅಂದರೆ ಸರ್ವಥಾ, ಸರ್ವಸ್ವೀ, no ಏನೂ ಇಲ್ಲ, none ಏನೂ ಇಲ್ಲ, somewhat, something, a little ಒಂದಿಷ್ಟು, ಸ್ವಲ್ಪ, any ಏನಾದರೂ, Much[3] ಬಹಳ ಎಂದು ತಿಳಿದುಕೊಳ್ಳಬೇಕು. ಉದಾ—

Is he *any better* to-day? ಅವನಿಗೆ ಈವೊತ್ತು ಏನಾದರೂ ಗುಣವುಂಟೋ?

Is he *any the better* to-day for the medicine? ಈ ಔಷಧದಿಂದ ಅವನಿಗೆ ಈವೊತ್ತು ಏನಾದರೂ ಗುಣವಾಗಿದೆಯೋ?

He is *no better* to-day ಅವನಿಗೆ ಈವೊತ್ತು ಏನೂ ಗುಣವಿಲ್ಲ.

He is *none the better* to-day for it ಅದರಿಂದ ಅವನಿಗೆ ಈವೊತ್ತು ಏನೂ ಗುಣವಾಗಲಿಲ್ಲ.

---

1) Some ಎಂಬದಕ್ಕೆ ಬದಲಾಗಿ somewhat, something ಎಂಬ ಶಬ್ದಗಳು ಬರುತ್ತವೆ. Enough ಇದು ವಿಶೇಷಣದ ಮೂಲರೂಪಕ್ಕೆ ಸಂಬಂಧಿಸಿರಲು, ಅದರ ಪ್ರಯೋಗವು ಕ್ರಿಯಾವಿಶೇಷಣದಂತೆ ಆಗುತ್ತದೆ. ಆಗ ಅದಕ್ಕೆ ತಾರತಮ್ಯಕ ರೂಪವು ಹತ್ತುವದಿಲ್ಲ. 2) All along ಆರಂಭದಿಂದ ಈಗಿನವರೆಗೆ, all at once ಒಮ್ಮೆಲೇ, All alone ಒಬ್ಬನೇ, At all ಏನೂ, ಇವುಗಳಲ್ಲಿ ಸಹ all ಎಂಬದು ಕ್ರಿಯಾವಿಶೇಷಣವೆಂದು ತಿಳುಕೊಳ್ಳಬೇಕು. 3) Much ಇದರ ಅರ್ಥವು ಒಮ್ಮೊಮ್ಮೆ ಬಹುತರವಾಗಿ, ಪ್ರಾಯಶಃ ಕೂಡಿದಂತೆ ಆಗುತ್ತದೆ; ಮತ್ತು ಈ ಅರ್ಥವಿರಲಾಗಿ Pretty much ಎಂಬ ಶಬ್ದವನ್ನು ಉಪಯೋಗಿಸುವರು. Rama and Govinda say *much* (ಅಥವಾ *pretty much*) the same thing ರಾಮು, ಗೋವಿಂದ ಇವರಿಬ್ಬರ ಅಭಿಪ್ರಾಯವು ಬಹುತರವಾಗಿ ಒಂದೇ.

☞ ಈ ತರದ ವಾಕ್ಯಗಳಲ್ಲಿ ಇಂಥಾದ್ದರಿಂದ ಚಲೋ ಅಥವಾ ಕೆಟ್ಟ ಎಂಬ ಅರ್ಥವಿರಲಾಗಿ ವಿಶೇಷಣದ ಹಿಂದೆ the ಹಾಕಬೇಕು, ಆ ಅರ್ಥವಿರದಿದ್ದರೆ ಹಾಕಬಾರದು.

## ೧೨೩ ಶಬ್ದಸಂಗ್ರಹ ೨೧.

To for'ti-fy { ಸುತ್ತ ಲು ಗೋಡೆಕಟ್ಟಿ ಭದ್ರಪಡಿಸು. | Whichev'er, Which-so-e'ver } ಯಾವದಾದರೂ.

To spoil ಕೆಡಿಸು. | A sim'ple-ton { ಎಬಡ, ಕಿಸವಾಯಿ, ತಿಳಿಗೇಡಿ.

Fruit'less ನಿಷ್ಫಲ, ನಿಷ್ಪ್ರಯೋಜಕ. | A wit'ness ಸಾಕ್ಷಿ.

Who-ev'er, Who-so-ev'er } ಯಾರಾದರೂ. | What ev'er, What-so ev'er } ಏನಾದರೂ, ಏನೇನು.

A pa'tient { (ವೈದ್ಯನು ಪರಾಮರಿಸುವ) ರೋಗಿ. | Dip { ೧ ಎದ್ದು, ಅದ್ದು; ೨ ಮುಳುಗು.

After' dark ಕತ್ತಲೆಯಾದ ಬಳಿಕ.

To ex-pect' a man ಒಬ್ಬರ ಹಾದೀ ನೋಡು, ಒಬ್ಬರನ್ನು ನಿರೀಕ್ಷಿಸು.

To ex-pect' a man to do a thing { ಯಾವನಾದರೊಬ್ಬನು ಏನಾದರೂ ಮಾಡುವನೆಂದು ತಿಳಿದುಕೊಳ್ಳು

To ask for par'don, to beg par'don ಕ್ಷಮಿಸಬೇಕೆಂದು ಬೇಡಿಕೊಳ್ಳು.

To pros'trate one's self ಸಾಷ್ಟಾಂಗವೆರಗು, ಅಡ್ಡಬೀಳು.

ಪ್ರಥಮಾರಂಭದಿಂದ, ಮೊಟ್ಟಮೊದಲಿನಿಂದ { from the ver'y be-gi'nning, from the very first.

ಬಹಳ, ಆತುರ,—ತ್ವರೆ great haste.

ಅತಿ ಅವಸರ hot haste.

ಎಲ್ಲ ಮಾತಿನಿಂದ, ಎಲ್ಲಾ ಬಗೆಯಿಂದ in ev'er-y way, in ev'er-y respect

ಮುಣುಗಿಸು, ಹಾಳುಮಾಡು To ruin a man.

ನಡೆನುಡಿಗಳು Man'ners.

ಯಾವ ರೀತಿಯಿಂದಾದರೂ in any way.

ಯಾವ ಪ್ರಕಾರದಿಂದಲೂ ಅಲ್ಲ in no way.

ಲಾಭವಾಗು to obtain' profit, to be ben'efit ted.

ಎಷ್ಟೋ ಸಾರಿ of'ten, of'ten-times.

ನಿನಗೆ ಏನಾಗಿದೆ ? what is the mat'ter with you ?

## ಭಾಷಾಂತರಪಾಠ ೨೧.

೧೨೪ The boys were not permitted to leave the house after dark. How long do you expect me to wait here for you[1]? I do not wish you to wait at all. I never want other people to do any thing unwillingly. They say that the town will be fortified. They say that the Turks have been defeated. They expect you this evening. You are expected this evening. It[2] is you who are to blame[3]. It was your brother who first informed them of their danger. It is I who have given you the letter. It is he who has said so. It is you who have to ask for pardon. They and their children have spoiled the flowers, no one else. Was it you that sent me that beautiful necklace? They told me of it. Who is at the door? It is I, mamma; will you, please, open it? Was it you who broke this window? It was not I; mamma. It was those street boys. I think it was he who is just running away. Who is there? It is a gentleman who wishes to see you. Do you know him? No, sir, he seems to be a foreigner. Who is in my room upstairs? It is a lady who has given me this letter. Do you know her? Yes, madam, she is the daughter of one Claudio. There are some people downstairs who wish to see you. I think they are the workmen; whom you ordered yesterday to come here. Are there any witnesses present? All my labour was invain. Are you *any* better? I am *all* the better for that. I am *no* better now than I was before. I am *none* the better for it. I am *somewhat* better to-day than I was yesterday. He spent much money but that did not better his condition. How are you to-day? Thank[4] you. I am *much* better. You really must do something to better your condition. It is true that he worked hard, but he was *none* the better for it. All his efforts were fruitless. I had to beg his pardon for the insult[5] I gave him.

---

1) ನಿನ್ನ ಮನಸ್ಸಿನಲ್ಲಿ ನಾನು ನಿನ್ನ ಸಲುವಾಗಿ ಇಲ್ಲಿ ಎಷ್ಟೊತ್ತು ನಿಲ್ಲಬೇಕೆಂದಿದೆ? 2) ಕರ್ತೃವಿನ ಮೇಲೆ ಜೋರು ಕೊಡುವದಾದರೆ, it, is ಎಂಬ ಶಬ್ದಗಳನ್ನು ಮೊದಲು ಹಾಕಿ who ಎಂಬ ಸರ್ವನಾಮವನ್ನು ಮುಂದೆ ಹಾಕಬೇಕು. 3) To blame = to be blamed. 4) ಇಲ್ಲಿ I ಎಂಬ ಕರ್ತೃವು ಅಧ್ಯಾಹೃತ ಇದೆ. 5) ಅಪಮಾನ.

ಅವನು ಅದಕ್ಕಿಂತ ಮತ್ತೂ ಹೆಚ್ಚು ಹೇಳಿದನು. ಜಾನಕಿಗಿಂತ ದ್ರೌಪದಿಯು ಬಹಳೇ[1] ಚಲುವೆ ಇದ್ದಾಳೆ. ಅವನಿಗೆ ಈವೊತ್ತು ಒಂದಿಷ್ಟು ನೆಟ್ಟಗದೆ. ಆ ಔಷಧದಿಂದ ಅವನಿಗೆ ಏನೂ ಗುಣವಿಲ್ಲ[2]. ಅದರಿಂದ ಅವನಿಗೆ ಎಲ್ಲ ಮಾತಿನಿಂದಲೂ ನೆಟ್ಟಗದೆ. ನಿನ್ನೆ ಸಾಯಂಕಾಲಕ್ಕೆ ಅವನ ಪ್ರಕೃತಿಯು ಸ್ವಲ್ಪ ಹೆಚ್ಚು ಕೆಟ್ಟಿತ್ತು[3]; ಆದರೆ ಈವೊತ್ತು ಅವನಿಗೆ ಸ್ವಲ್ಪ ಗುಣವುಂಟು. ಅವನು ನಿನ್ನನ್ನು ಮೊದಲಿನಿಂದ ವಂಚಿಸುತ್ತ ಬಂದಿದ್ದಾನೆ. ನೀನು ನಿನ್ನ ಪಾಠವನ್ನು ಮೊಟ್ಟಮೊದಲಿನಿಂದ ತಿರುಗಿ ಅನ್ನು. ಅವನು ನದಿಯ ದಂಡೆಯ ಮೇಲೆ ಕೇವಲ ಒಬ್ಬನೇ[4] ಕೂತಿದ್ದನು. ಅವನು ನನ್ನ ಮಾತೇ[5] ಕೇಳಲಿಲ್ಲ. ಅವನು ಏನೇನೂ ಮಾಡುತ್ತಿದ್ದಿಲ್ಲ. ಸುಧಾರಿಸುತ್ತ ಹೋಗಬೇಕೆಂದು ನಿನ್ನ ಮನಸ್ಸೇನಾದರೂ ಇದ್ದರೆ[6] ನೀನು ನಿರುದ್ಯೋಗಿಯಾಗಿರುವದು ತರವಲ್ಲ. ಹೀಗೆ ಮಾಡುವವನಿಗೆ ಶಿಕ್ಷೆಯಾಗುವದು. ನಿನ್ನ ಮನಸ್ಸಿಗೆ ಬಂದವರಿಗೆ[7] ನೀನು ಇದನ್ನು ಹೇಳಬಹುದು. ಇದ್ದದ್ದೆಲ್ಲ ಸರಿಯಾಗಿದೆ. ನಿನಗೆ ಬೇಕಾದದ್ದು ತೆಗೆದುಕೋ. ಅವರು ಬಂದಾಗ ಅತಿ ಅವಸರದಲ್ಲಿರುತ್ತಾರೆ. ಕೆಲವರು ವೈದ್ಯರು ರೋಗಿಗಳನ್ನು ನೋಡಲಿಕ್ಕೆ ಬಂದಾಗ ಅವರಿಗೆ ವಾಡಿಕೆಯಾಗಿ[8] ತಿರುಗಿ ಹೋಗುವ ಆತುರವು ಬಹಳ ಇರುತ್ತದೆ. ನೀನು ಹೋಗಲಿಕ್ಕೆ ಇಷ್ಟೇಕೆ ಅವಸರ ಮಾಡುತ್ತೀ ?

ಅವನು ನನ್ನನ್ನು ಎಲ್ಲಾ ಬಗೆಯಿಂದ ಮುಣಗಿಸಿದ್ದಾನೆ. ಅವನ ನಡೆನುಡಿಗಳು ಸುಧಾರಿಸಲೇ ಇಲ್ಲ[9]. ಯಾವ ರೀತಿಯಿಂದಾದರೂ ನಿನಗೆ ಲಾಭವಾಯಿತೋ ? ಹೇಗಾದರೂ ನಾನು ಅವನಿಗೆ ಹೀಗೆ ಹೇಳಲಿಕ್ಕೆ ಬೇಕು. ಶ್ರೀಮಂತರು ಒಮ್ಮೊಮ್ಮೆ ತಮ್ಮ ಸಂಪತ್ತಿನ ದಾಸರಾಗುತ್ತಾರೆ. ನನ್ನ ಹೊಸ ರುಮಾಲು ಕಾಣದ ಹಾಗಾಗಿದೆ; ನೀನು ಅದನ್ನು ಎಲ್ಲಿಯಾದರೂ ನೋಡಿದ್ದೀಯಾ ? ಈಗ ನನ್ನಿಂದ ಏನೂ ಮಾಡೋಣಾಗದು. ನಾನು ಅವನನ್ನು ಆವೊತ್ತು ಮಾತ್ರ ನೋಡಿದೆನು. ಮೊನ್ನೆ ಅವನು ಎಲ್ಲಿ ಇದ್ದನು ? ಈವೊತ್ತು ಅವನು ಕಾಶಿಯಲ್ಲಿದ್ದಾನೆ. ಈವೊತ್ತು ಕೂಸಿಗೆ ಏನಾಗಿದೆಯೋ ಏನೋ[10]. ಅದು ಈವೊತ್ತು ಏನೂ ತಿನ್ನಲೊಲ್ಲದು; ನೀವು ಅದಕ್ಕೆ ಏನಾದರೂ ಔಷಧ ಕೊಟ್ಟಿದ್ದೀರಾ ? ಇಲ್ಲ. ನಾನು ಏನೂ ಕೊಟ್ಟಿಲ್ಲ. ನಾವು ವೈದ್ಯನನ್ನು ಕರೆತರಬೇಕು[11]. ಏನಾದರೂ ಮಾಡಬೇಕು, ಈಗ ಅದಕ್ಕೆ ಸ್ವಲ್ಪ ನೆಟ್ಟಗದೆ. ಆ ಔಷಧದಿಂದ ಅದಕ್ಕೆ ಸ್ವಲ್ಪ ಗುಣವುಂಟು.

1) Much more, considerably more. 2) He is none the better for that medicine. 3) He was a little worse. 4) All alone, all by himself. 5) ನನ್ನ ಮಾತು=me. 6) If you at all wish to improve yourself. 7) To whom so-ever you like. 8) Generally, usually. 9) He was in no way improved in his manners. 10) I do not know, I know not. 11) We must send for the doctors.

# ೧೫ ನೇ ಪಾಠ.

## ಸಂಖ್ಯಾವಾಚಕ ಶಬ್ದಗಳು.

## NUMERALS.

೧೫೫ ಸಂಖ್ಯಾವಾಚಕ ಶಬ್ದಗಳು— **one** ಒಂದು, **two** ಎರಡು, **three** ಮೂರು. **four** ನಾಲ್ಕು, **five** ಐದು, **six** ಆರು, **seven** ಏಳು, **eight** ಎಂಟು, **nine** ಒಂಬತ್ತು, **ten** ಹತ್ತು, **eleven** ಹನ್ನೊಂದು, **twelve** ಹನ್ನೆರಡು, **thirteen** ಹದಿಮೂರು, **fourteen** ಹದಿನಾಲ್ಕು, **fifteen** ಹದಿನೈದು, **sixteen** ಹದಿನಾರು, **seventeen** ಹದಿನೇಳು, **eighteen** ಹದಿನೆಂಟು, **nineteen** ಹತ್ತೊಂಬತ್ತು, **twenty** ಇಪ್ಪತ್ತು, **twnty-one** ಇಪ್ಪತ್ತೊಂದು ಮುಂತಾದವುಗಳು –**Thirty** ಮೂವತ್ತು, **forty** ನಾಲ್ವತ್ತು, **fifty** ಐವತ್ತು, **sixty** ಅರವತ್ತು: **seventy** ಎಪ್ಪತ್ತು, **eighty** ಎಂಬತ್ತು, **ninety** ತೊಂಬತ್ತು, **one hundred** ನೂರು, **one hundred and one** ನೂರಾ ಒಂದು ಮುಂತಾದವುಗಳು—**One hundred and ninety nine** (ಒಂದು) ನೂರಾ ತೊಂಬತ್ತರೊಂಬತ್ತು, **two hundred** ಇನ್ನೂರು, **one thousand** ಒಂದು ಸಾವಿರ, **one thousand and one** ಒಂದು ಸಾವಿರದಾ ಒಂದು ಮುಂತಾದವಗಳು - **one thousand one hundred and eleven** ಒಂದು ಸಾವಿರದಾ ಒಂದು ನೂರಾ ಹನ್ನೊಂದು, ಅಥವಾ **eleven hundred and eleven** ಮುಂತಾದವುಗಳು— **One hundred thousand** ಒಂದು ಲಕ್ಷ. **one million** ಹತ್ತು ಲಕ್ಷ, **ten millions** ಒಂದು ಕೋಟಿ ಮುಂತಾದವುಗಳು.

೧೫೬ ಯಾವದಾದರೊಂದು ವಿಷಯವನ್ನು ಕುರಿತು ಬರೆಯುವಾಗ ದೊಡ್ಡ ಸಂಖ್ಯೆ ಇರದಿದ್ದರೆ, ಅಂಕಿಗಳನ್ನು ಉಪಯೋಗಿಸಬಾರದು.

೧೫೭ ಎಷ್ಟೋ ಸಂಖ್ಯಾವಾಚಕ ಶಬ್ದಗಳು ಇಂಗ್ಲಿಷದಲ್ಲಿ ನಾಮಪದಗಳಾಗುತ್ತವೆ.[1] **A pair** ಜೋಡು, **a couple** ಜೋಡು, ಎರಡು, **a dozen** ಹನ್ನೆರಡು, **a score** ಇಪ್ಪತ್ತು, **a hundred** ನೂರು, **a thousand** ಸಹಸ್ರ, ಸಾವಿರ, **a million** ಹತ್ತು ಲಕ್ಷ, **a half** ಅರ್ಧ,

1) **One, two** ಮುಂತಾದ ಶಬ್ದಗಳು ಒಮ್ಮೊಮ್ಮೆ ನಾಮಪದಗಳಾಗುತ್ತವೆ, ಹೇಗಂದರೆ *Five* **is not a large number** ಐದು ಇದು ದೊಡ್ಡ ಸಂಖ್ಯೆ ಅಲ್ಲ.

a quarter ಕಾಲು ಮುಂತಾದವುಗಳು[1]. ಇವುಗಳ ಹಿಂದೆ ಸಂಖ್ಯಾವಾಚಕ ವಿಶೇಷಣವಿದ್ದರೆ, ಇವುಗಳ[2] ಬಹುವಚನದ ರೂಪವು[3] ಏಕವಚನದ ರೂಪದಂತೆಯೇ ಇರುತ್ತದೆ. ಉದಾ—

Six *pair* of stockings ಆರು ಜೋಡು ಕಾಲುಚೀಲುಗಳು.

೧೨೮ A dozen, a hundred a thousand ಮುಂತಾದ ಶಬ್ದಗಳ ಮುಂದಿನ of ಲೋಪವಾಗುತ್ತದೆ[4]. ಉದಾ—

Five *hundred* men ಐನೂರು ಜನ.
ಇದರ ಅರ್ಧ *half* this, ಅಥವಾ a *half* of this.

೧೨೯ ಕ್ರಮವಾಚಕಗಳು—First, second, third, fourth, fifth, sixth, seventh, eighth, nineth, tenth, eleventh, twelfth, twentieth twenty-first, five hundred, and eighty-fourth ಮುಂತಾದವುಗಳು.

This is the *fifteenth* lesson ಇದು ಹದಿನೈದನೇ ಪಾಠ.

೧೩೦ Both ಎರಡು, ಇಬ್ಬರು, ಉಭಯತರೂ ಈ ಶಬ್ದವು ಒಮ್ಮೊಮ್ಮೆ ವಿಶೇಷಣ ಒಮ್ಮೊಮ್ಮೆ ನಾಮಪದವಾಗುತ್ತದೆ. ಉದಾ—

There were men on *both sides* of the river ನದಿಯ ಎರಡೂ ಬದಿಗೆ ಜನರಿದ್ದರು.

*Both of my parents* are living, *My parents* are *both* living ನನ್ನ ತಂದೆ ತಾಯಿಗಳಿಬ್ಬರೂ (ಜೀವದಿಂದ) ಇದ್ದಾರೆ.

---

1) ಬೇರೆ ನಾಮಪದಗಳು Three-fourths ಮುಕ್ಕಾಲು, ಮೂರು ನಾಲ್ಕನೇ ಅಂಶ, two-thirds ಎರಡು ಮೂರನೇ ಅಂಶ, one and a half ಒಂದೂವರೆ, one and a quarter ಒಂದೂ ಕಾಲು, one and three quarters ಒಂದೂ ಮುಕ್ಕಾಲು ಮುಂತಾದವುಗಳು. 2) ಆದರೆ dozen (ಹನ್ನೆರಡು), score (ಇಪ್ಪತ್ತು), hundred (ನೂರು) ಮುಂತಾದವುಗಳಿಂದ dozens, scores, hundreds ಎಂಬ ರೂಪಗಳು ಒಮ್ಮೊಮ್ಮೆ ಆಗುತ್ತವೆ. ಉದಾ:-I saw *dozens* of them. There were *scores* of mangoes on that tree. He has *hundreds* of rupees in his bag. There were *thousands* of locusts in that flight. ಈ ಪ್ರಕಾರ ಬಹುವಚನವನ್ನು ಉಪಯೋಗಿಸಬಹುದು. 3) ಹಿಂದೆ ಸಂಖ್ಯಾವಾಚಕ ವಿಶೇಷಣವಿದ್ದರೆ ಬಹುವಚನದ ರೂಪವು ಬರುವದು. 4) A couple, a pair, a score, a quarter ಇವುಗಳ ಮುಂದಿನ of ಲೋಪವಾಗುವದಿಲ್ಲ. 5) Eighth ಇದು eightth ಇದರ ಅಪಭ್ರಂಶವಿದ್ದಾಗ್ಯೂ, ಅದರ ಉಚ್ಚಾರವು ಎಟ್ಥ ಆಗುತ್ತದೆ.

He has lost *both of his parents;* ಅಥವಾ He lost *both*[1] *his parents* ಅವನು ತಂದೆತಾಯಿಗಳಿಬ್ಬರನ್ನೂ ಕಳಕೊಂಡಿದ್ದಾನೆ, ಅಥವಾ ಅವನಿಗೆ ತಂದೆ ತಾಯಿಗಳಿಬ್ಬರೂ ಇಲ್ಲ.

I saw *both the prisoners* ನಾನು ಇಬ್ಬರೂ ಕೈದಿಯರನ್ನು ನೋಡಿದೆನು.

*Both of us* went away ನಾವಿಬ್ಬರು ಹೊರಟುಹೋದೆವು.

I shall have to punish *both of* you ಅಥವಾ I shall have to punish *you both* ನಾನು ನಿಮ್ಮಿಬ್ಬರನ್ನೂ ಶಿಕ್ಷಿಸಬೇಕಾಗುವದು.

I saw *both of them* ಅಥವಾ I saw *them both* ನಾನು ಆ ಉಭಯರನ್ನೂ ಕಂಡೆನು.

೧೩೧ ಮುವ್ವರು, ನಾಲ್ವರು, ಅಂದರೆ three persons, four persons ಒಮ್ಮೊಮ್ಮೆ persons ಎಂಬ ಶಬ್ದವನ್ನು ಬಿಟ್ಟುಬಿಡುತ್ತಾರೆ. ಉದಾ—

They were *three* ಅವರು ಮೂರು ಮಂದಿ ಇದ್ದರು.

೧೩೨ One by one ಒಬ್ಬೊಬ್ಬರು; Two by two *or* two and two ಇಬ್ಬಿಬ್ಬರು; Three and (*or* by) three ಮುವ್ವಮುವ್ವರು ಮುಂತಾದವುಗಳು. ಉದಾ—

He sent them away *two by two* ಅವನು ಅವರನ್ನು ಇಬ್ಬಿಬ್ಬರಾಗಿ ಕಳಿಸಿಬಿಟ್ಟನು.

ಒಮ್ಮೊಮ್ಮೆ by ದ ಮುಂದೆ one, two, three ಮುಂತಾದ ಶಬ್ದಗಳ ಬಹುವಚನವನ್ನು ಪ್ರಯೋಗಿಸುವರು, ಆಗ ಸಹ ಇದೇ ಅರ್ಥವಾಗುತ್ತದೆ ಉದಾ—

We are to go to him *by ones, by twos* and *by threes* ನಾವು ಅವನ ಬಳಿಗೆ ಒಬ್ಬೊಬ್ಬರು, ಇಬ್ಬಿಬ್ಬರು, ಮುವ್ವಮುವ್ವರು ಈ ಪ್ರಕಾರ ಹೋಗತಕ್ಕದ್ದದೆ.

೧೩೩ The first three ಮೊದಲನೇ ಮೂರು, the first five ಮೊದಲನೇ ಐದು ಇತ್ಯಾದಿ.

---

1) Both ಎಂಬ ಶಬ್ದವು his, her, its, their, my ಮುಂತಾದ ಶಬ್ದಗಳ ಹಿಂದೆ ಬರುತ್ತದೆ, ಮುಂದೆ ಬರುವದಿಲ್ಲ. ಉದಾ— I saw *both his sons.*

೧೩೪ Once ಒಮ್ಮೆ, twice ಎರಡು ಬಾರಿ, thrice ಅಥವಾ three times ಮೂರು ಸಾರಿ, four times ನಾಲ್ಕು ಸಾರಿ ಇತ್ಯಾದಿ.

೧೩೫ ಆವೃತ್ತಿವಾಚಕಗಳು–Double ಅಥವಾ two-fold ಇಮ್ಮಡಿ[1], ಎರಡಷ್ಟು; triple, treble, ಅಥವಾ three-fold ಮುಮ್ಮಡಿ,ಮೂರರಷ್ಟು; four-fold, five-fold ಇತ್ಯಾದಿ.

೧೩೬ Single ಎಂಬ ಶಬ್ದಕ್ಕೆ ಮುಖ್ಯವಾಗಿ ಆರು ಅರ್ಥಗಳಾಗುತ್ತವೆ. ೧) ಒಂದೆ, ಒಬ್ಬನೇ; ೨) ಒಂದೂ, ಒಂದಾದರೂ; ೩) ಮದುವೆಯಾಗದ; ೪) ಒಂಟಿ ಪದರಿನ, ಒಂಟಿಳೆಯು; ೫) ದ್ವಂದ್ವ; ೬) ನಿಷ್ಕಪಟವುಳ್ಳ. ಉದಾ—

A *single* city ಒಂದೇ ಪಟ್ಟಣ.

He did not give me a *single* farthing ಅವನು ನನಗೆ ಒಂದು ಕಾಸಾದರೂ ಕೊಡಲಿಲ್ಲ.

A *single* man ಮದುವೆಯಾಗದ ಮನುಷ್ಯ.
A *single* thread ಒಂಟಿಳೆಯ ದಾರ.
A *single* combat ದ್ವಂದ್ವ ಯುದ್ಧ.
A *single* hearted man ನಿಷ್ಕಪಟವುಳ್ಳ.

## ೧೩೭ ಶಬ್ದಸಂಗ್ರಹ ೨೨.

| | | | |
|---|---|---|---|
| Tri'ed | (ವಿ.) ಪರೀಕ್ಷಿತ, ಒರೆಗೆ ಹಚ್ಚಿದ | Dis'mal | ೧ ಕತ್ತಲಾದ, ೨ ದುಃಖಕರವಾದ, ಭಯಂಕರ. |
| Vis'ible | ಕಣ್ಣಿಗೆ ಕಾಣುವ, ದೃಶ್ಯ. | A par'ty of (men) | ಗುಂಪು, ಪಕ್ಷ, ಪಂಗಡ. |
| In-vis'ible | ಕಾಣದ, ಅದೃಶ್ಯ. | To a-mount' to | ಒಟ್ಟಿಗೆ ಆಗು. |
| To e-lapse[2] | ಕಳೆ, ಗತಿಸು. | Worth | ಬೆಲೆಯುಳ್ಳ, ಕ್ರಯವುಳ್ಳ. |
| In-come | ಆದಾಯ, ಉತ್ಪನ್ನ. | A yard | (ಅರಿವೆ ಅಳೆಯುವ) ವಾರು, ಗಜ. |
| ಇಷ್ಟು | so much. | ದೋತರ[3] | a do'tra', a garment |

1) ಇವು ವಿಶೇಷಣಾತ್ಮಕ ಶಬ್ದಗಳು, ಆದರೆ double ಎಂಬದು ಮಾತ್ರ ಒಮ್ಮೊಮ್ಮೆ ನಾಮಪದವಾಗುತ್ತದೆ. ಮತ್ತು ಅದರ ಮುಂದಿನ of ಬಹುಶರವಾಗಿ ಲೋಪವಾಗುತ್ತದೆ. ಮುಂದಿನ ಶಬ್ದಗಳು ವಿಶೇಷಣವಾಗಲಿ, ಕ್ರಿಯಾವಿಶೇಷಣವಾಗಲಿ ಆಗುತ್ತವೆ. Twice as much as ಎರಡಷ್ಟು; thrice as much as ಮೂರರಷ್ಟು; four times as much as ನಾಲ್ಕಷ್ಟು ಇತ್ಯಾದಿ. ಒಮ್ಮೊಮ್ಮೆ as much as ಎಂಬ ಶಬ್ದಗಳನ್ನು ಬಿಟ್ಟು ಬಿಡುತ್ತಾರೆ. ಉದಾ— I paid him four times the price he asked ಅವನು ಬೇಡಿದ್ದರ ನಾಲ್ಕಷ್ಟು ಬೆಲೆಯನ್ನು ನಾನು ಅವನಿಗೆ ಕೊಟ್ಟೆನು. 2) ಇದರ ಕರ್ತೃವು ಕಾಲವಾಚಕ ಶಬ್ದವಿರಬೇಕು. 3) A cloth generally used a Hindu as an upper or lower garment.

ಅಷ್ಟು as much.

(ಧಾರಣೆ) ಇಳಿ to fall (in price).

(ಧಾರಣೆ) ಏರು to rise (in price).

ಜೂಜು gam'bling

ಬಳಸಿದ, ಉಪಯೋಗಿಸಿದ } sec'ondhand.

More or less — ಹೆಚ್ಚು ಕಡಿಮೆ, ಬಹಳಿಲ್ಲ, ತುಸು.

With the na'ked eye — { ಬರೇ ಕಣ್ಣಿನಿಂದ, ದುರ್ಬೀನು ಮುಂತಾದ್ದರ ಸಹಾಯವಿಲ್ಲದೆ.

ನೂರಾರು hu'ndreds of.

ಮುತ್ತಿಗೆ ಹಾಕು { to be-siege', to lay siege to.

ಸ್ವದೇಶಾಭಿಮಾನವುಳ್ಳ pa-triot'ic.

ಬಿರುಗಾಳಿ a tem'pest, storm.

ಸೊಂಟರಗಾಳಿ a whirl'wind.

ಇಂತಿಷ್ಟು ಅಸ್ತಿವಂತನಾಗಿರು, ಬೆಲೆಯುಳ್ಳವನಾಗಿರು } to be worth so much.

ಅಸಲ್ ಖರೀದಿ, ಮೂಲಕ್ರಯ prime cost, the o-rig'i-nal price.

ಮಾರುವ ಕ್ರಯ the sel'ling price.

—ವಿಷಯವಾಗಿ as-for-, as to-.

ಯುದ್ಧ ಮಾಡುವವರು, ದಂಡಾಳುಗಳು fight'ing men.

## ಭಾಷಾಂತರಪಾಠ ೨೨.

೧೩೮ A few old tried friends are better than a great many more acquaintance. We will rest here a little, I am very tired. It was you who encouraged him more or less to do what he has done. How is your mother to-day? Is she any better? I think she is rather better. *One* and *two* are *three*. *Four times five* is *twenty*. *Six times seven* is *forty-two*. *Eight times nine* is *seventy-two*. *Ten times ten* is *hundred*, *ten times a hundred* is *a thousand*. A year has *twelve* months, a month has *thirty* or *thirty-one* days, a day has *twenty four* hours, and an hour has *sixty* minutes. About *two thousand* stars are visible to the naked eye. Since the birth of Chirst 1933 years have elapsed. His father's income is *two hundred and eighty* rupees a year[1]. His debts amount to 4000 rupees. What is the price of this cloth? It is *seven* rupees and *twelve* annas a yard. Let me have *two* yards of it.

1) ವರ್ಷಕ್ಕೆ.

The boys walked *by twos. They* separated in parties *of twos* and *threes. A hundred* and *fifty* years ago Bombay was only a little village. Vienna is the largest town in all Austria and has at present about 13,64,000 inhabitants. Queen Victoria died on the 22nd of January 1901.

ಆತನ ಆದಾಯವು ವರ್ಷಕ್ಕೆ ಸುಮಾರು ಏಳು ಸಾವಿರ ರೂಪಾಯಿ ಆಗುವದೋ? ಈ ಮನೆಯು ಎಷ್ಟು ಬೆಲೆ ಬಾಳುವದು? ಅದು ಸುಮಾರು ಹತ್ತು ಸಾವಿರ ರೂಪಾಯಿ ಬೆಲೆ ಬಾಳಬಹುದು. ಅದು ಅಷ್ಟು ಬೆಲೆಯುಳ್ಳದ್ದಿರುವದು ನಿಶ್ಚಯವು. ಈ ಕುದುರೆಯು ಇಷ್ಟು ಹೆಚ್ಚಿನ ಬೆಲೆಯುಳ್ಳದ್ದೆಂದು[1] ನಿಮಗೆ ತೋರುತ್ತದೋ? ಆ ಕುದುರೆ ನಿಮಗೆ ಇಷ್ಟು ತುಟ್ಟಿ ಬೀಳಬಾರದೆಂದು ನನಗೆ ತೋರುತ್ತದೆ. ಯಾವದಾದರೊಂದು ವಸ್ತು ಕೊಂಡುಕೊಳ್ಳುವದು ಬಹಳ ಸುಲಭ. ಆದರೆ ಅದನ್ನು ತಿರಿಗಿ ಮಾರುವದು ಬಹಳ ಕಠಿಣ. ಆ ಕುದುರೆಗೆ ತಿರಿಗಿ ಅಷ್ಟೇ ಬೆಲೆ ಬಂದೀತೆಂದು ನಿಮಗೆ ತೋರುತ್ತದೋ? ಅದಕ್ಕೆ ಬಿದ್ದಷ್ಟು ಬೆಲೆ ತಿರಿಗಿ ಬಂದೀತೆಂದು ನನಗೆ ತೋರುವದಿಲ್ಲ. ಈ ಅರಿವೆಯ ಮೂಲ ಕ್ರಯವು ಏನು ಇದ್ದೀತು? ಮೂಲ ಕ್ರಯವು ಬಹಳ ಇರುವದಿಲ್ಲ ಆದರೆ ಮಾರುವ ಕ್ರಯವು ಬಹಳ ಹೆಚ್ಚು ಇರುತ್ತದೆ. ನಾನು ಅವನನ್ನು ಹೋದ ವರ್ಷ ನೋಡಿದ್ದಕ್ಕಿಂತ-ಅವನು ಬಹಳ[2] ಎತ್ತರ ಬೆಳೆದಿದ್ದಾನೆ. ಈಗ ಸಕ್ಕರೆಯ ಧಾರಣಿಯು ಹೇಗೆ ಅದೆ? ಈಗ ಸಕ್ಕರೆ ಯಾವ ಧಾರಣಿಯಿಂದ ಮಾರುತ್ತದೆ[3]? ಸಕ್ಕರೆಯ ಧಾರಣಿಯು ಇಳಿದಿದೆ. ಆದರೆ ಎಣ್ಣೆಯದು ಏರಿದೆ. ತುಪ್ಪದ ವಿಷಯಕ್ಕೆ ಮಾತ್ರ ಅದು ಇನ್ನೂ ಎಷ್ಟು ಏರೀತೆಂಬುವದು ಹೇಳಕೂಡದು. ಸಕ್ಕರೆಯು ಇನ್ನೂ ಇಳಿಯುವಂತೆ ಕಾಣುತ್ತದೆ. ನನಗೆ ಎರಡೇ ರೂಪಾಯಿ ಬೇಕಾಗಿದ್ದವು. ಕೆಲವು ದೇಶಗಳಲ್ಲಿ ಶ್ರೀಮಂತರು ತಮ್ಮ ಎಷ್ಟೋ ಸಂಪತ್ತನ್ನು ಜೂಜಾಡಿ ಕಳಕೊಳ್ಳುತ್ತಾರೆ. ಜೂಜಾಡುವದೊಂದು ದುರ್ಗುಣವು. ಇಷ್ಟು ಅನ್ನಾ ಅವನು ಉಣ್ಣಲಾರನು. ಇಷ್ಟು ದೊಡ್ಡ ರಕಮು ನನಗೆ ಬೇಡ, ನನಗೆ ಬರೇ ಅದರ ಅರ್ಧ ಕೊಡು. ನನಗೆ ಬರೇ ಹತ್ತೊಂಬತ್ತು ರೂಪಾಯಿ ಬೇಕು. ನಾನು ಈ ಪುಸ್ತಕವನ್ನು ಒಂದೇ ರೂಪಾಯಿಗೆ ಕೊಂಡೆನು. ನಿನಗೆ ಅದು ಇಷ್ಟು ಅಗ್ಗ ಹೇಗೆ ಸಿಕ್ಕಿತು? ನಾನು ಉಪಯೋಗಿಸಿದ್ದನ್ನು ಕೊಂಡೆನು. ಹೀಗೆ (ಕೊಂಡರೆ) ಅನೇಕ ಜಿನಸುಗಳು ಬಹಳ ಅಗ್ಗ ಸಿಗುತ್ತವೆ.

---

1) Worth such a high price. 2) Much, considerably.
3) How does sugar sell at present.

ಈಗ ಪುಣೆಯಲ್ಲಿ ಗೋದೀ ಧಾರಣಿ ಹೇಗದೆ? ಇನ್ನೂ ಆರು ತಿಂಗಳ ತನಕ ಕಾಳಿನ ಧಾರಣಿ ಇಳಿಯುವಂತೆ ತೋರುವದಿಲ್ಲ[1]. ನೀವು ಎಷ್ಟು ಜೋಡು ಕಾಲು ಚೀಲಗಳನ್ನು ಕೊಂಡುಕೊಂಡಿರಿ? ನಾನು ಕಾಲುಚೀಲದ ಜೋಡು ಕೊಳ್ಳಲೇ ಇಲ್ಲ. ಒಂದು ದೋತರ ಜೋಡು ಮಾತ್ರ ಕೊಂಡೆನು. ನಾನು ಆರು ಜೋಡು ಕೈಚೀಲಗಳನ್ನು ಕೊಳ್ಳತಕ್ಕದ್ದಿತ್ತು; ಆದರೆ ಅದಕ್ಕೆ ನನಗೆ ಹೊತ್ತು ಇದ್ದಿಲ್ಲ. ಅಲ್ಲಿ ನೂರಾರು ಜನರಿದ್ದರು, ಆದರೆ ಆದರೊಳಗೆ ಸ್ವದೇಶಾಭಿಮಾನಿಗಳು ತೀರ ತುಸು ಜನರಿದ್ದರು. ಶತ್ರುಗಳು ಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಆದರೊಳಗೆ ಸುಮಾರು ಏಳು ಸಾವಿರ ಜನ ಇತ್ತು; ಆದರೆ ಆದರೊಳಗೆ ಕಾದಾಡುವ ಮಂದಿ ತೀರ ಸ್ವಲ್ಪ ಇತ್ತು. ಆವನು ಎರಡು ದೋತರ ಜೋಡಿಗಳನ್ನು ಹತ್ತೂ ಮುಕ್ಕಾಲು ರೂಪಾಯಿಗೆ ಕೊಂಡನು.

## ೧೩೯ ಶಬ್ದಸಂಗ್ರಹ ೨೩.

| | | | |
|---|---|---|---|
| Au'tumn | ಶರತ್ಕಾಲ. | A birth'day | ಹುಟ್ಟಿದ ದಿವಸ. |
| A cen'tury | ಶತಮಾನ. | A pair of slip'pers | ಮೊಚ್ಚಿಜೋಡು. |
| A shirt | ಕಮೀಸು, ಒಳಅಂಗಿ. | Reg'u-lar | ನಿಯಮದಿಂದ ನಡೆಯುವವ. |
| A pound | ಪಕ್ಕಾ ಅರ್ಧಸೇರು, ರಾತಲು. | A rid'dle | ಒಗಟು. |
| ಮದುವೆಯಾದ | married. | ಮದುವೆಯಾಗದ, ಅವಿವಾಹಿತ | un-mar'ried, single. |

| | |
|---|---|
| To sail round the earth | ಜಲಮಾರ್ಗದಿಂದ ಭೂಪ್ರದಕ್ಷಿಣೆ ಮಾಡು. |
| To per-form' a work, to do a work, to work | ಕೆಲಸ ಮಾಡು. |
| ಮದುವೆ ಮಾಡಿಕೊ | To mar'ry, to get married. |
| ಮದುವೆಯಾಗು | To be married. |
| ಇನ್ನೂ ವರೆಗೆ | as yet. |
| ತಪ್ಪು ಮಾಡು | to make a mistake', to com'mit, to be mis-ta'ken. |
| ಹೊಟ್ಟೆಗೆ ಹಾಕು | to sup-port'. |
| ಊಟಕ್ಕೆ ಹೇಳು | to in-vite' to din'ner. |
| ಕುಟ್ಟಿ ಹೇಳು | to ask a high price for. |

1) It does not seem likely.

### ಭಾಷಾಂತರ ಪಾಠ ೨೩

೧೪೦ In England spring begins on the 21st of March, summer on the 22nd of June, autumn on the 21st of September, and winter on the 21st of December. Ammerika was discoverd in the *fifteenth* century by Columbus. Magellan was the *first* who sailed round the earth. Luther died in his 53rd year. Yesterday I bought *four pairs* of gloves, *six pairs* of stockings, *two dozen* shirts, and a *dozen* silk pocket-handkerchiefs. How many yards of linen are there in that piece? I do not know. I have not measured it. On my birth day my parents sent me a new turban, a gold watch, beautiful penknife, *a pair* of boots, and *two pairs* of shoes. *Go* to the shoemaker and buy me a *pair* of slippers. Fetch *half* a *pound* of sugar from grocer's. This street will take us to the harbour. Rama cannot do *twice* as much work in an hour as Govinda does. He can do *twice* the work that you can. He has not read a *single* book for the last fortnight. You ought to have prepared at least *the first ten* letters during the holidays. He was *twice* disappointed. He is now worth *twenty thousand* Repees. The Jain population of India is about 12,70,0000.

ಎಲ್ಲರು ಒಮ್ಮೆಲೇ ನನ್ನ ಹತ್ತರ ಬರಬೇಡಿರಿ; ಇಬ್ಬಿಬ್ಬರು ಇಲ್ಲವೆ ಮೂವ ಮೂವರು ಬನ್ನಿ. ಇಷ್ಟು ಹುಡುಗರ ಪರೀಕ್ಷೆ ತಕ್ಕೊಳ್ಳಲಿಕ್ಕೆ ನನಗೆ ಏನಿಲ್ಲೆಂದರೂ ಐದು ತಾಸು ಬೇಕಾಗುವದು[1]. ವೈದ್ಯನ ಮನೆಗೆ ಹೋಗಿ ಬರಲಿಕ್ಕೆ[2] ನಿನಗೆ ಎಷ್ಟು ಹೊತ್ತು ಹತ್ತೀತು? ನನಗೆ ಕನಿಷ್ಠ ಪಕ್ಷಕ್ಕೆ ಮುಕ್ಕಾಲು ತಾಸು ಹತ್ತೀತು. ಈವೊತ್ತು ನನಗೆ ಮೂವತ್ತೆರಡನೇ ವರ್ಷ ಮುಗಿಯುತ್ತದೆ[3]; ನಾಳೆ ನಾನು ಹುಟ್ಟಿದ ದಿವಸ. ನಿಮಗೆ ಎಷ್ಟು ವರ್ಷ? ನನಗೆ ಮೂವತ್ತೈದು ವರ್ಷ. ನಿಮಗೆ

1) It will take me at least five hours to etc ಅಥವಾ I shall require at least five hours to etc. 2) To go to and come back from. 3) I complete my thirty-second year to-day.

ಮೂವತ್ತೈದನೇ ವರ್ಷ ಮುಗಿದದೆಯೋ? ಇಲ್ಲ, ನನಗೆ ಮೂವತ್ತನಾಲ್ಕನೇ ವರ್ಷವು ಮುಗಿದದೆ, ಮತ್ತು ಮೂವತ್ತೈದನೇದು ನಡೆಯುತ್ತದೆ[1]. ಇಂಗ್ಲಿಷದಲ್ಲಿ ನಾವು ಈ ಪ್ರಕಾರ ನಮ್ಮ ವಯಸ್ಸು ಹೇಳುವದಿಲ್ಲ[2]; ನಮಗೆ ಎಷ್ಟು ವರ್ಷ ಮುಗಿದಿರುತ್ತವೋ ಅಷ್ಟು ವರ್ಷ ನಮ್ಮ ವಯಸ್ಸು ಎಂದು ಹೇಳುತ್ತೇವೆ[3]. ನಾಳೆಗೆ[4] ಮೊದಲಿನ ಹತ್ತು ಪುಟ ಓದಿಕೊಂಡು ಬನ್ನಿರಿ[5]. ಅವನ ಎಲ್ಲಾ ಅಣ್ಣತಮ್ಮಂದಿರ ಮದುವೆಯಾಗಿದೆ[6]; ಆದರೆ ಅವನು ಇನ್ನೂವರೆಗೆ ಅವಿವಾಹಿತನಾಗಿದ್ದಾನೆ. ಅವನಿಗೆ ಒಂದು ಶಬ್ದದ ಅರ್ಥ ಸಹ ಹೇಳಲಿಕ್ಕೆ ಬರುವದಿಲ್ಲ. ಗಿಡದ ಮೇಲೆ ಒಂದು ಹೂ ಸಹ ಇದ್ದಿಲ್ಲ. ಅವನು ಒಂದು ತಪ್ಪು ಸಹ ಮಾಡಲಿಲ್ಲ. ಅಂಗಡಿಯೊಳಗೆ ಅನೇಕ ದೋತರ ಜೋಡಿಗಳಿದ್ದವು; ಆದರೆ ಅವುಗಳೊಳಗೆ ಚಲೋದು ಒಂದೂ ಇದ್ದಿಲ್ಲ[7]. ರಾಮನ ಎರಡಷ್ಟು ಕೆಲಸ[8] ಗೋವಿಂದನು ಒಂದು ತಾಸಿನೊಳಗೆ ಮಾಡುವನು. ನಾನು ಡಿಸೆಂಬರ ತಿಂಗಳ ೮ ನೇ ತಾರೀಖಿಗೆ ತಿರುಗಿ ಬರುವೆನು. ನಮ್ಮ ಮಾತು ಸತ್ಯವೆಂಬ ಬಗ್ಗೆ ನಾವಿಬ್ಬರು ಮನಗಾಣಿಸಿ ಕೊಡುವೆವು. ನಾನು ಅವರಿಬ್ಬರಿಗೂ ಹಾಗೆ ಮಾಡಬೇಡಿರೆಂದು ತಿರುತಿರುಗಿ ಹೇಳಿದೆನು. ಆದರೆ ಅವರಲ್ಲಿ ಒಬ್ಬನು ಮಾತ್ರ ನನ್ನ (ಬುದ್ಧಿ) ಮಾತು ಕೇಳಿದನು. ಎರಡನೇಯವನು ತೀರ ಭಿನ್ನವಾದ ರೀತಿಯಿಂದ ವರ್ತಿಸಿದನು. ನನ್ನ ಇಬ್ಬರು ಸ್ನೇಹಿತರ ಅಂಬೋಣವು ಸರಿಯಲ್ಲ[9]. ನನ್ನ ಇಬ್ಬರೂ ಸ್ನೇಹಿತರು ತಪ್ಪಿದ್ದಾರೆ[10]. ಹಿಂದೂ ಜನರೊಳಗೆ ಮದುವೆಯಾಗದ ಪುರುಷರು ತೀರ ಸ್ವಲ್ಪ. ಚಿಕ್ಕ ಬಾಲಕರದು ಸಹ ಮದುವೆಯಾಗಿರುತ್ತದೆ. ಯಾವನಾದರೊಬ್ಬನ ಆದಾಯವು ಇಬ್ಬರ ಹೊಟ್ಟೆ ತುಂಬುವಷ್ಟು ಇರದಿದ್ದರೆ, ಅವನು ಮದುವೆಯಾಗದೆ ಇರುವದು ಲೇಸು ಯಾವನಾದರೂ ಲಗ್ನ ಮಾಡಿಕೊಳ್ಳಬಹುದು. ಆದರೆ ತನ್ನ ಹೆಂಡತಿಯ ಹೊಟ್ಟೆಗೆ ಹಾಕುವದಕ್ಕೆ ತ್ರಾಣವಿಲ್ಲದವನಾಗಿರುವದು ಬಹಳ ಕೆಟ್ಟದ್ದು. ನನ್ನ ಸ್ನೇಹಿತರಲ್ಲಿ ಇಬ್ಬರೇ ಇಲ್ಲಿ ಇದ್ದಾರೆ. ನಾನು ನನ್ನ ಇಬ್ಬರೂ ಸ್ನೇಹಿತರನ್ನು ಊಟಕ್ಕೆ ಕರೆದಿದ್ದೇನೆ. ನೀನು ಆ ಅರಿವೆ ತುಟ್ಟಿ ಹೇಳುತ್ತೀ. ಈ ಒಗಟು ಯಾರು ಬಿಡಿಸುವರು[11].

---

1) I am in my thirty fifth year ಅಥವಾ the thirty-fifth is begun. 2) To tell, to give. 3) We say that we are as many years old as the years that we have completed. 4) For to-morrow. 5) Read. 6) Are married. 7) There was not a single good one 8) Twice the work that, twice as much work as. 9) Both my friende are wrong ಅಥವಾ, are in the wrong. 10) Are mistaken. 11) to solve, to unriddle.

## ೧೬ ನೇ ಪಾಠ.

### ಪ್ರಧಾನ ವಾಕ್ಯಗಳನ್ನು ಸಂಯೋಗಿಸುವ ಅವ್ಯಯಗಳು.

### Co-ordinating Conjunctions.

೧೪೧ ಪ್ರಧಾನ ವಾಕ್ಯಗಳನ್ನು ಒಂದಕ್ಕೊಂದು ಕೂಡಿಸುವ ಸಮುಚ್ಚಾಯಕಾವ್ಯಯಗಳಿಗೆ ಇಂಗ್ಲಿಷದಲ್ಲಿ Co-ordinating Conjunctions ಅಂದರೆ ಪ್ರಧಾನ ವಾಕ್ಯಗಳನ್ನು ಸಂಯೋಗಿಸುವ ಅವ್ಯಯಗಳು ಅನ್ನುತ್ತಾರೆ. ಅವುಗಳಲ್ಲಿ ಮುಖ್ಯವಾಗಿ ಮೂರು ವಿಧವು-ಸಮುಚ್ಚಯದರ್ಶಕ, ವಿರೋಧದರ್ಶಕ, ಪರಿಣಾಮದರ್ಶಕ.

೧೪೨ ಸಮುಚ್ಚಯದರ್ಶಕಾವ್ಯಯಗಳು-And, both-and ಮತ್ತು ಹಾಗು, ಊ; as well as, as well, also, likewise, too, ಮತ್ತು ಉ—ಊ; ಸಹ, ಕೂಡ; not only-but (also) ಇಷ್ಟೇ ಅಲ್ಲ, ಆದರೆ ಮತ್ತೂ; partly-partly ಸ್ವಲ್ಪ—ಸ್ವಲ್ಪ, ಒಂದಿಷ್ಟು—ಒಂದಿಷ್ಟು; first-then ಮೊದಲು-ಆ ಮೇಲೆ; firstly ಮೊದಲನೇ ಮಾತೇನಂದರೆ; secondly ಎರಡನೇದೇನಂದರೆ; thirdly ಮೂರನೇದೇನಂದರೆ; finally ಕಡೇ ಮಾತೇನಂದರೆ; further, Moreover ಮತ್ತೂ, ಇದಲ್ಲದೆ; as-as ಎಷ್ಟೋ ಅಷ್ಟು, ಅಷ್ಟು; the-the ಎಷ್ಟೆಷ್ಟು-ಅಷ್ಟಷ್ಟು, ಹೇಗೆ-ಹೇಗೆ, ಹಾಗೆ-ಹಾಗೆ.

೧೪೩ ಎರಡು ಮಾತುಗಳನ್ನು ಕೂಡಿಸುವದಕ್ಕೆ and ಇಲ್ಲವೆ both-and ಎಂಬ ಅವ್ಯಯಗಳನ್ನು ಪ್ರಯೋಗಿಸುವರು.

*Both* Rama *and* Govinda are clever boys ರಾಮನು ಗೋವಿಂದನು ಇಬ್ಬರೂ ಬುದ್ಧಿವಂತ ಹುಡುಗರು.

Rama *both* speaks *and* writes English well ರಾಮನಿಗೆ ಇಂಗ್ಲಿಷ ಮಾತಾಡಲಿಕ್ಕೂ ಬರೆಯಲಿಕ್ಕೂ ಬಹಳ ಚನ್ನಾಗಿ ಬರುತ್ತದೆ.

Rama *and* Govinda are both clever boys. ರಾಮನು ಗೋವಿಂದನು ಇಬ್ಬರೂ ಬುದ್ಧಿವಂತ ಹುಡುಗರು.

Rama *and* Govinda are both of them clever boys ರಾಮ ಗೋವಿಂದ ಇವರಿಬ್ಬರೂ ಬುದ್ಧಿವಂತ ಹುಡುಗರು.

ಕಡೆಯ ವಾಕ್ಯಗಳಲ್ಲಿದ್ದಂತೆ both ಎಂಬ ಶಬ್ದವು and ದ ಮುಂದೆ ಬಂದರೆ, ಆದು ವಿಶೇಷಣಾತ್ಮಕವಿರುತ್ತದೆ[1]. ಇಂಥಲ್ಲಿ ಅದು ಅವ್ಯಯವೆಂದು ತಿಳಿಯಕೂಡದು.

೧೪೪ And ಎಂಬದಕ್ಕೆ ಬದಲಾಗಿ as well as ಎಂಬದನ್ನು ಸಹ ಹಾಕುವ ರೂಢಿಯುಂಟು. ಆಗ both ಎಂಬದು ಬಹುತರ ಅವಶ್ಯವಿರುವದಿಲ್ಲ. ಉದಾ—

Rama speaks *as well as* writes English very well ರಾಮನಿಗೆ ಇಂಗ್ಲಿಷ ಮಾತಾಡಲಿಕ್ಕೂ ಬರೆಯಲಿಕ್ಕೂ ಬಹಳ ಚನ್ನಾಗಿ ಬರುತ್ತದೆ.

ಅಥವಾ and ಎಂಬ ಶಬ್ದವನ್ನಿಟ್ಟು ಮುಂದೆ also, too ಎಂಬ ಶಬ್ದಗಳನ್ನು ಹಾಕುವರು. ಉದಾ—

Rama and his wife also[2] } are gone out for a walk.
Rama and his wife too }

ರಾಮನು ಅವನ ಹೆಂಡತಿಯು ಇಬ್ಬರೂ ತಿರುಗಾಡಲಿಕ್ಕೆ ಹೋಗಿದ್ದಾರೆ.

೧೪೫ Not only-but also. Not only ಎಂಬ ಶಬ್ದಗಳು ಕರ್ತೃಪದದ ಹಿಂದೆ ಇದ್ದರೆ, ಸಹಾಯ ಕ್ರಿಯಾಪದವೂ ಕರ್ತೃಪದದ ಹಿಂದೆ ಇರುತ್ತದೆ. Also ಎಂಬ ಶಬ್ದವು but ಎಂಬದಕ್ಕೆ ಹೊಂದಿ ಮುಂದೆ ಇರುವದು ಅವಶ್ಯವದೆ, ಎಂದು ಹೇಳಕೂಡದು. ಉದಾ—

*Not only* is he come, *but* he has *also* finished nearly half the work ಅವನು ಬಂದಿದ್ದಾನಿಷ್ಟೇ ಅಲ್ಲ, ಆದರೆ ಸುಮಾರು ಅರ್ಧ ಕೆಲಸವನ್ನು ಮುಗಿಸಿದ್ದಾನೆ. ಅಥವಾ

He is *not only* come *but* has *also, etc.*

೧೪೬ *As—as.*

He is *as* virtuous *as* he is learned ಅವನು ಎಷ್ಟು ವಿದ್ವಾಂಸನಿದ್ದಾನೋ ಅಷ್ಟು ಸದ್ಗುಣವುಳ್ಳವನಿದ್ದಾನೆ, ಅಥವಾ, ಅವನು ವಿದ್ವಾಂಸನಿದ್ದಷ್ಟೇ ಸದ್ಗುಣವುಳ್ಳವನಿದ್ದಾನೆ.

೧೪೭ *The—the.*

*The* more you study *the* more will you learn ನೀವು ಅಭ್ಯಾಸ ಮಾಡುತ್ತಾ ಹೋದ ಹೋದ ಹಾಗೆ ಹೆಚ್ಚೆಚ್ಚು ಕಲಿಯುವಿರಿ.

---

1) ಹಿಂದಿನ ಪಾಠ ನೋಡು. 2) Too ದ ಹಿಂದೆ ವಾಕ್ಯದೊಳಗೆ and ಎಂಬದು ಅವಶ್ಯ ಇರಲಿಕ್ಕೇಬೇಕೆಂದು ಹೇಳಕೂಡದು; ಹೇಗಂದರೆ—He too said the same thing and he ಅಥವಾ he also.

ಈ ಶಬ್ದವು the ಎಂಬ ಉಪಪದದಂತೆ ಕಾಣಿಸಿದರೂ, ಅದರಿಂದ ತೀರ ಭಿನ್ನವಾಗಿದೆ. ಇದು ಒಂದು ಹಳೇ ಇಂಗ್ಲಿಷ ಶಬ್ದದ ತೃತೀಯಾ ವಿಭಕ್ತಿಯ ರೂಪವು. ಇದರ ಅರ್ಥವು 'ಆ ಪ್ರಮಾಣದಿಂದ' ಎಂದು ಅರ್ಥವಾಗುತ್ತದೆ. ಇದು ಕ್ರಿಯಾವಿಶೇಷಣವಿರುವದರಿಂದ ಇದನ್ನು ವಿಶೇಷಣಕ್ಕೆ ಇಲ್ಲವೆ ಮತ್ತೊಂದು ಕ್ರಿಯಾವಿಶೇಷಣಕ್ಕೆ ಮಾತ್ರ ಸಂಬಂಧಿಸಿ ಪ್ರಯೋಗಿಸುವರು.

೧೪೮ ವಿರೋಧದರ್ಶಕಾವ್ಯಯಗಳು—but ಆದರೆ; but then ಹಾಗಾದರೆ; only ಮಾತ್ರ; else, otherwise ಇಲ್ಲದಿದ್ದರೆ; ಇಲ್ಲದ ಪಕ್ಷಕ್ಕೆ; however, still, yet, nevertheless ಆದಾಗ್ಯೂ; either-or—, ಆಗಲಿ-ಆಗಲಿ; neither-or-ಊ ಇಲ್ಲ (ಅಲ್ಲ)—ಊ ಇಲ್ಲ (ಅಲ್ಲ); whether-or ಓ-ಓ-ಇದೋ—ಅದೋ ಇತ್ಯಾದಿ.

೧೪೯ ಪರಿಣಾಮದರ್ಶಕಾವ್ಯಯಗಳು—Therefore ಆದದರಿಂದ; hence ಹೀಗಿರುವದರಿಂದ; whence ಯಾವ ಕಾರಣದಿಂದ; concequently ಹೀಗಿರುವದರಿಂದ, ಅದರಿಂದ; accordingly ಆ ಪ್ರಕಾರ; thus, so ಹಾಗೆ, ಹೀಗೆ, ಆದ್ದರಿಂದ; so that ಹಾಗೆ, ಎಂತ, ಆದ ಕಾರಣ, ಇತ್ಯಾದಿ.

### ೧೫೦ ಶಬ್ದಸಂಗ್ರಹ ೨೪.

| | | | |
|---|---|---|---|
| Spec'ta-cles | ಚಾಳೀಸ, ಉಪನೇತ್ರ, ಸುಲೋಚನ | Friv'o-lous | ಕ್ಷುಲ್ಲಕ, ಹುರಳಿಲ್ಲದ, ಅಲ್ಪ. |
| A pair of scis'sors | ಕತ್ತರಿ. | To as-so'ciate with | ಸಂಗತಿ ಹಿಡಿ. |
| Mer'chan-dise | ೧ ಸರಕುಗಳು, ಮಾಲು; ೨ ವ್ಯಾಪಾರ. | Delight'ful | ಆನಂದಕರ ಉಲ್ಹಾಸಿತ, ಮನೋಹರ. |
| | | A'miable | ಪ್ರೀತಿಪಾತ್ರ, ಸೊಗಸಿನ. |
| A ware'house | ಮಳಿಗೆ, ವಖಾರ. | Up'right | ಪ್ರಾಮಾಣಿಕ, ಸರಳ, ನಿಷ್ಕಪಟ. |
| A fel'low | ಲುಚ್ಚ, ನೀಚ. | A deal'ing | ಕೊಡಕೊಂಬೋಣ, ವ್ಯವಹಾರ, ವ್ಯಾಪಾರ. |
| Wea'ri-ness | ದಣಿವು, ಬಳಲಿಕೆ, ಆಯಾಸ. | At-tach'ment | ಸ್ನೇಹ, ಪ್ರೀತಿ |
| A fig | ಅಂಜೂರ. | Need'y | ಬಡ, ದರಿದ್ರ, ಕೊರತೆಯಲ್ಲಿದ್ದ. |
| To prove | ೧ ಸಿದ್ಧಮಾಡು, ೨ ಕಂಡುಬರು, | To impair' | ಕೆಡಿಸು. |
| | | To de-cide | ನಿಶ್ಚಯಿಸು, ಬಗೆಹರಿಸು. |
| A note | ಚೀಟಿ, | Dis-tress | ಸಂಕಟ, ಕಷ್ಟ, |
| Snow | ಹಿಮ. | A hyp'o-crite' | ಕಪಟಿ, ಕಪಟಭಕ್ತಿಯವ, ಡಾಂಭಿಕ. |
| Vain | ದುರಭಿಮಾನ, ಡಾಂಭಿಕ. | | |

To re-ly' on (upon) — ವಿಶ್ವಾಸವಿಡು, ನಂಬು.
Fa'shion-a-ble — ಜನರೂಢಿಯ, ಸಭ್ಯರೀತಿಯ, ಲೋಕವ್ಯವಹಾರಕ್ಕೊಪ್ಪುವ
Ap-pa'rent — ೧ ಕಾಣುವಂಥ, ೨ ಸ್ಪಷ್ಟ.
Ice — ನೀರುಗಡ್ಡೆ, ಬರ್ಫ.
A play'mate — ಆಟದ ಗೆಳೆಯ, ಜತೆಗಾರ.
Ex'cel-lent — ಉತ್ಕೃಷ್ಟ, ಅತ್ಯುತ್ತಮ.
Tal'ents — ಬುದ್ಧಿ.
To ac-know'ledge — ಒಪ್ಪಿಕೊಳ್ಳು.
Good so-ciety, good com-pany' — ಸಜ್ಜನರು, ಸಜ್ಜನರ ಸಂಗತಿ.
To sup-ply' one's wants — (ಇವರ) ಕೊರತೆಗಳನ್ನು ಪೂರೈಸಿಕೊಡು.
A re-ligi'ous man — ಭಕ್ತಿಯುಳ್ಳವ, ನಿಷ್ಠೆವಂತ, ಧಾರ್ಮಿಕ ವೃತ್ತಿಯ.
An in-toxi-cating liquer — ಅಮಲೇರಿಸುವ, ಮದ್ಯ, ಸರಾಯಿ.
To spoil a man's cha'rac-ter — ಒಬ್ಬರ ಹೆಸರು ಕೆಡಿಸು, ಚಾರಿತ್ರ್ಯ ಕೆಡಿಸು.
To pay (or, clear, or discharge) one's debts — ಸಾಲಾ ತೀರಿಸು, ಋಣ ತೀರಿಸು.
ನಮ್ಮ ವಿಷಯಕ್ಕೆ ಎರಡನೇಯವರ ಅಭಿಪ್ರಾಯವನ್ನು ಲಕ್ಷಿಸದೆ ಇರು — to pay no at-ten'tion to the o-pin'ion of others about us, or not to mind what oth'ers think of us.
ಉದ್ಯೋಗವಿಲ್ಲದೆ ಇರು — to be with-out' em-ploy'ment.
ವಿರುದ್ಧ ಮಾಡು, ವಿಪರೀತ ಮಾಡು — to do the con'tra-ry.

## ಭಾಷಾಂತರಪಾಠ ೨೪.

೧೫೭ Carelessness *and* idleness are causes of great misfortune. My spectacles are on my desk *and* my scissors, on the table. The merchant has sold his goods *and also* warehouse. He is engaged in merchandise. My parents live in the country *and* my other relations *too.* I do not like him *nor* does he like me. The fellow does not pay his debts, *nor* does he acknowledge them. I have not heard of the misfortune, *nor* have any of my friends either[1]. Our servant is very faithful, *besides* being a man who thoroughly understands his work. If you associate with this gentleman, you will always have delightful companion, *Moreover,* you will have a friend, who will always assist you with his advice. In good society we are *not only* protected from evil *but* we also have an opportunity of

1) ಸಹ, ಅದರೂ.

learning a great-deal of good. The girl is *both* handsome *and* amiable. When he went home to his parents, he *neither* felt the heat of the sun *nor* the weariness of the road. Attachment cannot be bought, *and* those who wish to have friends *as well as* faithful servants, should keep this truth constantly in mind. He gave his money *partly* to poor people *and partly* to priests. *Firstly*, you must be deligent, *secondly* economical, *thirdly* you must be prudent in all your undertakings, *finally* you must be upright *and* honest in all your dealings, *then* with the blessing of God you will *not only* be able to supply your own wants, *but* will *also* be able to assist those that are poor *and* needy. The gardener has planted four sorts of fruit trees, *namely* guavas, pomegranates, plantains and figs.

Our neighbour is not rich, *but* he is content, *and* contentment is better than riches *and* honour. I cannot *however* approve of it. He is not tall, *still* he is strong *and* healthy. Many people pretend to be religious, *yet* their actions often prove that they are not such. He is not wicked *but* only vain and frivolous, but vanity *and* frivolity are not far from wickedness. Do not drink intoxicating liquors (spirits) *otherewise* you will impair your health. He is *either* really pious or he is The greatest hypocrite that ever lived on earth[1]. I will *either* call on you to-morrow, or send you my note to tell you my intentions. He is not The most diligent of boys, it is true, *nevertheless* he makes good progress, because he has excellent talents. He is prudent in all his undertakings, *nevertheless* he has had many misfortunes. I cannot decide *whethr* we should follow his advce *or* not. You have always been a friend to me, *therefore* you may rely on me in your distress. It is very cold, *hence* we may expect snow. Bad company will spoil your character, *consequently* you ought to be careful as to what friends you make. When I arrived my uncle was delighted to see me *and* I to see him. *The*

1) ಭೂಮಿಯ ಮೇಲೆ ಇದುವರೆಗೆ ಹುಟ್ಟಿದ ಡಾಂಭಿಕರಲ್ಲಿ ಇವನು ಅಗ್ರಗಣ್ಯನು.

**sooner you go, *the* sooner will you arrive. *The* sooner you do it *the* more pleased shall I be. I had to pay my school fees to-day *but* I did not remember this *and* so, I had to go home to fetch it. *The* sooner you begin, *the* sooner will it be over. *The* more learned a man is, *the* more highly is he esteemed.**

ಎಲ್ಲ ಜನರು ದೇವರ ಮಕ್ಕಳು. ಆದಕಾರಣ ಅವರು ಒಬ್ಬರಮೇಲೊಬ್ಬರು ಪ್ರೀತಿ ಮಾಡತಕ್ಕದ್ದು. ನಾವು ಎಲ್ಲರಿಗೂ ಒಳಿತು ಮಾಡುತ್ತಿರಬೇಕು; ಆದರೆ ಪ್ರತಿ ಒಬ್ಬರನ್ನು ಸಂತೋಷಪಡಿಸುವದಕ್ಕೆ ಪ್ರಯತ್ನ ಮಾಡಬಾರದು. ಹಾಗೆ ಮಾಡುವದು ತೀರ ಅಶಕ್ಯವದೆ. ನಮ್ಮ ಕರ್ತವ್ಯವನ್ನು ನಾವು ಮಾಡಬೇಕು; ಮತ್ತು ಅದನ್ನು ಮಾಡುವಾಗ ನಮ್ಮ ವಿಷಯಕ್ಕೆ ಎರಡನೇಯವರ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ನಾವು ಲಕ್ಷಿಸಬಾರದು. ನೀನು ಸುಳ್ಳು ಮಾತಾಡಬೇಡ; ಮಾತಾಡಿದರೆ, ನಾನು ನಿನ್ನನ್ನು ಶಿಕ್ಷಿಸಬೇಕಾಗುವದು. ನೀವೆಲ್ಲರೂ ಒಬ್ಬರಹಿಂದೊಬ್ಬರು ಪಡಸಾಲೆಯೊಳಗೆ ಹೋಗಿರಿ; ಆದರೆ ಅಲ್ಲಿ ಏನೂ ಗದ್ದಲ ಮಾಡಬೇಡಿರಿ. ಯಾವ ತಾದರೊಂದು ಕೆಲಸವನ್ನು ಎರಡನೇಯವರಿಗೆ ಮಾಡಲಿಕ್ಕೆ ಹೇಳುವದಕ್ಕಿಂತ ಅದನ್ನು ತಾನು ಸ್ವತಃ ಮಾಡುವದು ನನ್ನ ಮನಸ್ಸಿಗೆ ಹೆಚ್ಚು ಬರುತ್ತದೆ. ತನ್ನಿಂದ ಆಗುವ ಕೆಲಸವನ್ನು ಇನ್ನೊಬ್ಬರಿಗೆ ಮಾಡಲಿಕ್ಕೆ ಹೇಳುವದು ನನ್ನ ಮನಸ್ಸಿಗೆ ಬರುವದಿಲ್ಲ. ಈ ಹುಡುಗನು ಈಗ ಎರಡು ವರ್ಷಗಳಿಂದ ಇಂಗ್ಲಿಷ ಕಲಿಯುತ್ತ ಇದ್ದಾನೆ; ಆದರೆ ಅವನಿಗೆ ಇನ್ನೂ v ಮತ್ತು w ಇವುಗಳನ್ನು ಚನ್ನಾಗಿ ಉಚ್ಚರಿಸಲಿಕ್ಕೆ ಬರುವದಿಲ್ಲ. ನೀವು ಹೀಗೆ ಮಾಡತಕ್ಕದ್ದಿದ್ದಿಲ್ಲ; ಆದರೂ ಆದ ಮಾತಿಗೆ ಉಪಾಯವಿಲ್ಲ. ನಿನ್ನ ಮನಸ್ಸಿಗೆ ಬಂದದ್ದು ಮಾಡು[1]; ಆದರೆ ನಿನ್ನ ಉದ್ದೇಶ ಮಾತ್ರ ಸ್ಪಷ್ಟ ವಿರಲಿ ಅವನು ಮಾತಾಡಲಿಲ್ಲ ಆದರೆ ಕಾದಾಡಿದನು. ನೀನು ಬಹಳ[2] ಅಭ್ಯಾಸ ಮಾಡಲಿಕ್ಕೆ ಬೇಕು, ಇಲ್ಲದಿದ್ದರೆ[3] ನೀನು ಉದ್ಯೋಗವಿಲ್ಲದೆ ಇರಬೇಕಾಗುವದು. ನೋಡತಕ್ಕಂಥಾದ್ದು ಏನೂ ಇದ್ದಿಲ್ಲ; ಆದುದರಿಂದ ನಾವು ನಮ್ಮ ದಾರೀ ಹಿಡಿದು ಹೋದೆವು[4]. ಅವನು ನಮಗೆ ಮರುದಿವಸ ಬರಲಿಕ್ಕೆ ಹೇಳಿದನು; ಆದಕಾರಣ ನಾವು ಹೋದೆವು. ನಾವು ಅವನ ಭೆಟ್ಟಿಗೆ ಹೋದೆವು; ಆದರೆ ಅವನು ಮನೆಯಲ್ಲಿದ್ದಿಲ್ಲ. ಆದರಿಂದ ನಾವು ತಿರುಗಿ ಬರಬೇಕಾಯಿತು. ಅವನು ಹೀಗೆ ಮಾಡಲಿಲ್ಲ. ಇಷ್ಟೇ ಅಲ್ಲ, ಆದರೆ ವಿಪರೀತ ಮಾಡಬೇಕೆಂದು ಅವನ ಉದ್ದೇಶವಿತ್ತು. ರಾಮನೂ

1) Do as you please; do as you like. 2) Hard. 3) (or) ಒಮ್ಮೊಮ್ಮೆ or ದ ಅರ್ಥವು ಇಲ್ಲದಿದ್ದರೆ ಎಂತ ಆಗುತ್ತದೆ. 4) So we went on our way.

ಗೋವಿಂದನೂ ಅವರ ಅಕ್ಕತಂಗಿಯರೂ ಕೂಡಿ ನಾಳೆಗೆ ಬರತಕ್ಕವರಿದ್ದಾರೆ. ನಾನು ಬಹಳ ಪ್ರಯತ್ನ ಮಾಡಿದೆನು, ಆದರೆ ನನ್ನ ಮನೋರಥವು ಕೈಗೂಡಿ ಬರಲಿಲ್ಲ; ಆದುದರಿಂದ ನನ್ನ ಆಶೆ ಎಲ್ಲ ಕುಗ್ಗಿ ಹೋಯಿತು. ನಾನು ನಿನ್ನ ಆಟದ ಗೆಳೆಯರ ಕೂಡ ನಿನಗೆ ಆಡಹೋಗಗೊಡುವೆನು ಆದರೆ ನೀನು ರಾತ್ರಿ ತಡಮಾಡಕೂಡದು.

---

## ೧೭ ನೇ ಪಾಠ.

### ಪ್ರಧಾನ ವಾಕ್ಯಗಳಿಗೆ ಅಧೀನ ವಾಕ್ಯಗಳ ಸಂಬಂಧ ತೋರಿಸುವ ಅನ್ವಯಗಳು,

### SUBORDINATING CONJUNCTIONS.

೧೫೨ ಪ್ರಧಾನ ವಾಕ್ಯಗಳಿಗೆ ಅಧೀನ ವಾಕ್ಯಗಳ ಸಂಬಂಧವನ್ನು ತೋರಿಸುವಂಥ ಸಮುಚ್ಚಾಯಕಾವ್ಯಯಗಳಿಗೆ Subordinating Conjunctions, ಅಂದರೆ ಪ್ರಧಾನ ವಾಕ್ಯಗಳಿಗೆ ಅಧೀನ ವಾಕ್ಯಗಳ ಸಂಬಂಧ ತೋರಿಸುವ ಅವ್ಯಯಗಳು ಅನ್ನುತ್ತಾರೆ. ಅವು ಮುಖ್ಯವಾಗಿ ಮೂರು ವಿಧವು—ಕಾರಣದರ್ಶಕ, ಸಂಕೇತದರ್ಶಕ, ಕಾಲದರ್ಶಕ.

೧೫೩ ಕಾರಣದರ್ಶಕ ಸಮುಚ್ಚಾಯಕಾವ್ಯಯಗಳು—Because, for ಯಾಕಂದರೆ; since as, in as much as ಯಾವ ಪಕ್ಷದಲ್ಲಿ- ಅದರಿಂದ; that, in order that-ಎಂದು-ಸಲುವಾಗಿ ಮುಂತಾದವುಗಳು.

೧೫೪ ಸಂಕೇತದರ್ಶಕ-if ರೆ; if not ಇಲ್ಲದಿದ್ದರೆ, ಹೀಗಿರದಿದ್ದರೆ; supposing that ಹೀಗೆ ಗ್ರಹಿಸಿದರೆ; in case that ರೆ; provided that ರೆ; ಹೀಗೆ ಇದ್ದರೆ ಮಾತ್ರ; unless (ಇಂಥಾದ್ದು ಮಾಡಿದ) ಹೊರತು as if-ರೆ;ಓ ಏನೋ ಎಂಬುವಂತೆ, ಇರುವ ಹಾಗೆ; though, although, notwithstanding that ರೂ; ಗ್ಯೂ; yet ಆದರೂ; lest ಆಗದ ಹಾಗೆ; whether-or--ಓ-ಓ, ಇದೋ—ಅದೋ; ಮುಂತಾದವುಗಳು.

೧೫೫ ಕಾಲದರ್ಶಕ—when ಯಾವಾಗ; before ಮುಂಚೆ; after ಅನಂತರ; till, until ತನಕ, ವರೆಗೆ; as soon as ಆಗುವಷ್ಟರೊಳಗೆ, ಆದಕೂಡಲೆ; while as (ಇಂಥ ಮಾತು) ಆಗುತ್ತಿರಲಾಗಿ ಇಲ್ಲವೆ ಮಾಡುತ್ತಿರಲಾಗಿ, ಆಗ; as long as ವರೆಗೆ, ತನಕ ಮುಂತಾದವುಗಳು.

ಈ ಅವ್ಯಯಗಳನ್ನು ಹೇಗೆ ಪ್ರಯೋಗಿಸಬೇಕೆಂಬದನ್ನು ಪಾಠದೊಳಗಿನ ಇಂಗ್ಲಿಷ ವಾಕ್ಯಗಳನ್ನು ಓದಿ ತಿಳಿದುಕೊಳ್ಳಬೇಕು.

### ೧೫೬. ಶಬ್ದಸಂಗ್ರಹ ೨೫.

| | | | |
|---|---|---|---|
| A crop | ಬೆಳೆ, ಪೈರು. | A spend'thrift | ದುಡ್ಡು ಹಾಳು ಮಾಡುವವ, ದುಂದುಗಾರ. |
| Fuss | ಗದ್ದಲ, ಗಡಿಬಿಡಿ. | To ap-pre'-ci-ate | ತಕ್ಕ ಬೆಲೆಕಟ್ಟು, ಯೋಗ್ಯತೆ ತಿಳಿ, ಗಣನೆಗೆ ತರು, ಎಣಿಸು. |
| To start | ಬೆದರು, ಸ್ತೈಕೆಗಿ, ಹಾರಿ ಬೀಳು. | A tour | ಪರ್ಯಟನ. |
| A spiri't | ಭೂತ, ಪಿಶಾಚ, ಆತ್ಮ ಚೈತನ್ಯ | To fade | ಒಣಗು, ಬಣ್ಣ ಹಾರಿಹೋಗು, ಬಾಡು, ಕಂದು, ಬಳಲು. |
| ಸಂತೋಷಪಡಿಸು, ಸಂತೋಷವಾಗು -ಪಡು. | to please, to be pleased | ಆಗ್ರಹಮಾಡು, ಒತ್ತಾಯ | to press, to urge. |
| ಹೊಳಪು, ಕಾಂತಿ, ನೂತನತ್ವ | fresh'ness. | ಇನ್ನುಮೇಲೆ | hence-forth, here-af'ter. |
| ಸಿಂಪಡಿಸು | to sprin'kle. | ಹೊಲಸು | dirt. |
| ಸಪ್ಪಗೆ | in-sip'id. | | |

| | |
|---|---|
| The crops failed | ಬರಿಸಾಲಾಯಿತು, ಬೆಳೆಗೇಡಾಯಿತು. |
| To look in'to | ಚನ್ನಾಗಿ ನೋಡು, ವಿಚಾರಿಸು. |
| To be at lei'sure | ತೆರವಿರು, ಖಾಲಿ ಇರು, ಪುರಸತ್ತು ಇರು, |
| To get lei'sure | ಸಮಯ ಸಿಗು, ಅವಕಾಶ ದೊರೆ. |
| Wor h see'ing | ನೋಡತಕ್ಕ. |
| To set a strong guard | ಬಲವುಳ್ಳ ಕಾವಲಿಡು. |
| Ran off | ಓಡಿ ಹೋದವು. |
| To whis'tle a tune | ಸಿಳ್ಳು ಹಾಕು. |
| To o-ver-sleep' one's self | ಬಹಳ ನಿದ್ರೆ ಮಾಡು, ಹೊತ್ತು ಮೀರಿ ಮಲಗು. |
| ರಾತ್ರಿಯಾಗುವ ವರೆಗೆ | till night. |
| ಕಾಲ್ನಡೆಯಿಂದ | on foot. |
| ಶ್ರಮಬಡು, ತೊಂದರೆಪಡು | to be put to troub'le. |
| ನಾಚಿಕೊಳ್ಳು | to be (or, to feel) a-shamed. |
| ಬಹಳ ದುಃಖಪಡು, ವ್ಯಸನಪಡು | to be much grieved. |
| ಸುಮ್ಮನಿರು | to keep qui'et. |
| ೧ ಲಕ್ಷಿಸು, ೨ ಚಿಂತೆಮಾಡು | to care for. |
| ಹೂವಿನ ತೋಟ | a man'go grove, a grove of mango tress. |

## ಭಾಷಾಂತರಪಾಠ ೨೫.

೧೫೭ Do as you are told, *for* much depends on it. The crops failed, *bacause* the season was dry[1]. *Since* you desire it, I will look into the matter. *As* we have a little leisure, let us see all that is worth seeing. *As* you cannot get what you ask, take what you can get. *Unless* you go, I will not. He started *as if* he saw a spirit, They set a strong guard *lest* any one should escape. *Provided that* all is safe, you may depart. I will praise thee *while* I live. Do you know *when* your parents will come home ? Dinner was on the table *when* the clock struck two. *While* two dogs were fighting for a piece of bone, a third ran off with it. I learnt my lesson *while* my brother was writing a letter. The boy was whistling a tune *as* (*while*) he went along the road[2]. *As soon as* I reach the place[3], I will send you a letter. *No sooner* did he learn that I was ill, *than* he came to see me. *Since* we have been in the country, the health of the children has improved a great deal. Many spendhrifts get poor *before* they learn economy. Happiness, like youth and health, is rarely appreciated *till* it is passed. As you have promised it[4], you must keep your word. *If* the weather continues fine, we will take a long walk this afternoon. *Unless* he is very much changed, I cannot allow you to keep company with him. I leave my pen-knife here, *in case* you should want it. You may make this tour, *provided that* your parents will give thair consent. *Although* you have wronged me so very often, *yet* I will pardon you. Buy only such clothes *as* will wear[5] well. May God grant that you may succeed in your undertaking. Honour your parents, *that* God may bless you. I shut him up in the room *lest* he should run away. *Lest* you should oversleep yourself, I will call you. If you will buy that pair of gloves, the colour of which has faded a little, you can have them at half price.

1) ವರ್ಷಾಕಾಲವೆಲ್ಲ ಹುಸಿ ಹೋಯಿತು, ಅಥವಾ ಇಡೀ ಮಳೆಗಾಲದಲ್ಲಿ ಮಳೆ ಆಗಲಿಲ್ಲ. 2) ದಾರಿಗುಂಟ. 3) ಅಂದರೆ shall have reached ಮುಟ್ಟಿದ ಕೂಡಲೆ. 4) It ಆ ಬಗ್ಗೆ. 5) ಬಾಳುವ.

೧೦೪ ಪ್ರಧಾನ ವಾಕ್ಯಗಳಿಗೆ ಅಧೀನ ವಾಕ್ಯಗಳ ಸಂಬಂಧ ತೋರಿಸುವ ಅವ್ಯಯಂಗಳು.
*Subordinating Conjunctions.*

---

ನನಗೆ ಪುರಸತ್ತು ಆದಾಗ ಬರುವೆನು. ನಾನು ಅದನ್ನು ನೋಡುತ್ತಿರುವಾಗ ಯಾವನೋ ಒಬ್ಬನು ನನ್ನ ಸಮೀಪಕ್ಕೆ ಬಂದನು. ರಾತ್ರಿಯಾಗುವ ವರೆಗೆ ಅವರು ಅಲ್ಲಿ ನಿಂತರು. ನಿನಗಿಂತ ಮುಂಚೆ ನಾನು ಹೋಗುವೆನು. ನಾನು ಹೋದ ಬಳಿಕ ಅವನು ಹೋದನು. ಒಬ್ಬ ಮುದುಕನು ಮಗನನ್ನು ಸಂಗಡ ಕರೆದುಕೊಂಡು ಸಂತೆಯೊಳಗೆ ತನ್ನ ಎತ್ತು ಮಾರಲಿಕ್ಕೆ ಒಯ್ಯುತ್ತಿರಲಾಗಿ, ಒಬ್ಬ ಹಾದಿಕಾರನು[1] ಅಂದದ್ದು ಇತ್ಯಾದಿ. ನಿನ್ನ ಮುಪ್ಪಿನ ತಂದೆಯು ನಡೆಯುತ್ತಿರುವಾಗ ನೀನು ಎತ್ತಿನ ಮೇಲೆ ಕುಳಿತುಕೊಳ್ಳುವದು ತಕ್ಕದ್ದಲ್ಲ. ನೀವು ಈ ಎತ್ತನ್ನು ಈ ಪರಿ ಕನಿಕರವಿಲ್ಲದೆ ಹೇರಿದ್ದರಿಂದ ಅದು ನಿಮ್ಮದೇ ಎಂದು ಯಾರು ಅಂದಾರು? ಅದು ಇಷ್ಟು ಚಮತ್ಕಾರವುಳ್ಳದ್ದಿದ್ದದರಿಂದ ಅದನ್ನು ನೋಡುವದಕ್ಕೆ ಜನರು ಗುಂಪುಗುಂಪಾಗಿ ನೆರೆದರು. ಅವನು ಕಂಡಕಂಡವರನ್ನು ಸಂತೋಷಪಡಿಸುವದಕ್ಕೆ ಮಾಡಿದ ಪ್ರಯತ್ನದಿಂದ ಯಾರಿಗೂ ಸಂತೋಷವಂತೂ ಆಗಲಿಲ್ಲ; ಇಷ್ಟೇ ಅಲ್ಲ, ಆದರೆ ತಾನು ಸ್ವತಃ ಶ್ರಮಪಟ್ಟದ್ದಲ್ಲದೆ ಎತ್ತು ಸಹ ಕಳಕೊಂಡನು[2]; ಆದುದರಿಂದ ಅವನು ನಾಚಿಕೊಂಡು ಬಹಳ ದುಃಖಪಟ್ಟನು. ಹುಡುಗರು ಪಡಸಾಲೆಯೊಳಗೆ ಬಂದ ಕೂಡಲೆ ಅವರು ಬಹಳ ಗದ್ದಲ ಮಾಡಹತ್ತಿದರು; ಆದಕಾರಣ, ಅವರಿಗೆ ನಾನು ಸುಮ್ಮನೆ ಕುಳಿತುಕೊಳ್ಳಿರೆಂದು ಹೇಳಿದೆನು. ನೀವು ಹೀಗೆ ಹೇಳುವದರಿಂದ ಅದು ಹಾಗೆ ಇರಲಿಕ್ಕೆ ಬೇಕು. ನೀವು ಅನ್ನುವಂತೆ ಇರಲಿಕ್ಕೆ ಬೇಕು. ನಿನಗೆ ಅವರು ಬಹಳ ಆಗ್ರಹ ಮಾಡಿದ್ದರಿಂದ ನೀನು ಅವನ ಮನೆಗೆ ಹೋಗತಕ್ಕದ್ದಿತ್ತು. ಆದರೆ ಇನ್ನು ಮೇಲೆ ನೀನು ತಿರುಗಿ ಹೀಗೆ ಎಂದೂ ಮಾಡಬಾರದು. ನಾವು ಎರಡನೇಯವರನ್ನು ಲಕ್ಷಿಸದಿದ್ದರೆ ಎರಡನೇಯವರು ನಮ್ಮನ್ನು ಯಾಕೆ ಲಕ್ಷಿಸಬೇಕು? ನಾವು ಪರರವರನ್ನು ಲಕ್ಷಿಸಿದ ಹೊರತು ಪರರವರು ನಮ್ಮನ್ನು ನಿಶ್ಚಯವಾಗಿ ಲಕ್ಷಿಸರು. ನಾವು ಕಳವು ಮಾಡಬಾರದು; ಯಾಕಂದರೆ, ಒಂದು ವೇಳೆ ಮನುಷ್ಯನು ನಮ್ಮನ್ನು ನೋಡದಿದ್ದರೂ ದೇವರು ಯಾವಾಗಲೂ ನೋಡಿಯೇ ನೋಡುತ್ತಾನೆ. ದೇವರು ನಮ್ಮನ್ನು ಯಾವಾಗಲೂ ನೋಡುತ್ತಿರುತ್ತಾನೆಂಬ ಮಾತು ನಾವು ಚನ್ನಾಗಿ ನೆನಪಿನಲ್ಲಿಡಬೇಕು. ನೀನು ನಾಳೆ ಪುಣೆಗೆ ಹೋಗುವದಾದರೆ, ಆ ಪತ್ರಗಳನ್ನು ನಾನು ಈ ಹೊತ್ತು ಬರೆದಿಡುವದು ಒಳ್ಳೇದು. ಶಿಕ್ಷಕನು ಹೇಳುವದನ್ನು ವಿದ್ಯಾರ್ಥಿಯು ಮನಸ್ಸುಗೊಟ್ಟು ಕೇಳದಿದ್ದರೆ, ಅವನು ತನ್ನ ಜ್ಞಾನವನ್ನು ಹೆಚ್ಚಿಸುವ ಬಗೆ ಏನು? ನಾನು ಅವನಿಗೆ ಸಿಟ್ಟು ಮಾಡುತ್ತಲೆ ಅವನು ಸುಮ್ಮನಾದನು. ಮಳೆಯಿಂದ ಗಿಡಗಳ ಮೇಲಿನ

---

1) A man who was passing by, or a passer by. 2) Moreover he lost his bullock, ಅಥವಾ and he lost his bullok into the bargain.

ಹೊಲಸು ತೊಳೆದು ಹೋಯಿತೆಂಧರೆ[1], ಅವುಗಳಿಗೆ ಹೆಚ್ಚು ಕಾಂತಿಯುಂಟಾಗು ತ್ತದೆ[2]; ಆದ್ದರಿಂದ ಗಿಡಗಳಿಗೆ ನೀರು ಹೊಯ್ಯುವಾಗ ಬೇರಿಗೆ ಹಾಕುವದಲ್ಲದೆ ಎಲೆಗಳ ಮೇಲೆ ಸಹ ಸಿಂಪಡಿಸಬೇಕು[3]. ಸದಾಶಿವ, ರಾಮ ಎಂಬವರಿಬ್ಬರು ಅಣ್ಣತಮ್ಮಂದಿರಿದ್ದರು[4]. ಅವರಿಬ್ಬರು ಒಂದುದಿನ ಆಡ್ತಾಡುತ್ತಿರಲಾಗಿ ಒಂದು ತೋಟದೊಳಗಿರುವ ಮಾವಿನ ತೋಪಿನ ಬದಿಯಿಂದ ನಡೆದರು[5]. ಆ ಮಾವಿನ ಗಿಡಗಳಿಗೆ ಚಲೋ ದೊಡ್ಡದೊಡ್ಡ ಕಾಯಿಗಳು ತುಂಬಾ ಆಗಿದ್ದವು. ಮಾವಿನ ಕಾಯಿ ಗಳು ಒಳ್ಳೇ ಪಾಡಿಗೆ ಬಂದದ್ದರಿಂದ[6] ಅವುಗಳ ಮೇಲೆ ಕೆಂಪು, ಹಳದಿ ಬಣ್ಣ ಬಂದಿತ್ತು.

---

## ೧೮ ನೇ ಪಾಠ.

### ಉಪಪದಗಳು.

### The Articles.

೧೫೮ An ಇಲ್ಲವೆ a ಎಂಬ ಉಪಪದದ ಮೂಲ ಅರ್ಥವು ಒಂದು ಎಂತ ಇದ್ದರೂ, ಈಗ ಇಂಗ್ಲಿಷದಲ್ಲಿ ಈ ಉಪಪದವು ಪ್ರಾಣಿಯು ಇಲ್ಲವೆ ಪದಾರ್ಥದ ಜಾತಿಯನ್ನಾಗಲಿ, ವರ್ಗವನ್ನಾಗಲಿ ಸೂಚಿಸುತ್ತದೆ. ಹೇಗಂದರೆ—a horse ಕುದುರೆ, ಅಂದರೆ ಕುದುರೆ ಎಂಬ ಜಾತಿಯ ಪಶು. ಆಕಳು ಅಥವಾ ಒಂಟೆ ಅಥವಾ ಬೇರೆ ಯಾವ ಜಾತಿಯದಲ್ಲ. ಆದರೆ one ಎಂಬ ಶಬ್ದವು ಸಂಖ್ಯೆ ಯನ್ನು ಸೂಚಿಸುವದು. ಹೇಗಂದರೆ—one horse ಒಂದು ಕುದುರೆ, ಅಂದರೆ ಎರಡು ಅಥವಾ ಹೆಚ್ಚು ಅಲ್ಲ ಎಂಬ ಅರ್ಥವು. ಆದರೂ an ಅಥವಾ a ಎಂಬದು ಒಮ್ಮೊಮ್ಮೆ ಸಂಖ್ಯೆಯನ್ನು ಸೂಚಿಸುತ್ತದೆ.

೧೫೯ Many, what, such ಎಂಬ ಶಬ್ದಗಳನ್ನು ವಿಶೇಷಣಗಳಂತೆ ಉಪಯೋಗಿಸಲಾಗಿ, ಇಲ್ಲವೆ too, so, how, as ಎಂಬ ಕ್ರಿಯಾವಿಶೇಷಣಗಳು ವಿಶೇಷಣಗಳ ಹಿಂದೆ ಬರಲಾಗಿ a ಅಥವಾ an ಎಂಬ ಉಪಪದವು ಆ ವಿಶೇಷ ಣಕ್ಕೂ ನಾಮಪದಕ್ಕೂ ನಡುವೆ ಬರುತ್ತದೆ. ಉದಾ—

| | |
|---|---|
| Many *a* year | ಅನೇಕ ವರ್ಷಗಳು. |
| What *a* great storm | ಎಂಥಾ ದೊಡ್ಡ ಬಿರುಗಾಳಿ. |
| Such *a* book | ಇಂಥ ಪುಸ್ತಕ |

---

1) Is washed away. 2) They get additional freshness, they appear fresher. 3) The water must be poured at the roots and must also be sprinkled on the leaves. 4) Were brothers. 5) Passed by. 6) The mangoes were ripe and ready to be gathered.

| | |
|---|---|
| Too large *a* house | ಬಹಳ ದೊಡ್ಡ ಮನೆ. |
| So tall *a* tree | ಇಷ್ಟು ಎತ್ತರವಾದ ಗಿಡ. |
| How useful *an* instrument | ಎಷ್ಟು ಉಪಯೋಗವುಳ್ಳ ಆಯುಧ. |
| As good *a* man | ಅಷ್ಟು ಒಳ್ಳೇ ಮನುಷ್ಯ. |

೧೬೦ ಅಂಕಿತನಾಮಕ್ಕೆ ಉಪಪದವು ಹತ್ತುವದಿಲ್ಲೆಂದು ಹಿಂದೆ[1] ಹೇಳಿದ್ದೇವೆ. ಆದರೆ ಗುಣವಾಚಕ ವಿಶೇಷಣವು ಆ ಅಂಕಿತನಾಮಕ್ಕೆ ಸಂಬಂಧಿಸಿದ್ದರೆ, the ಉಪಪದವನ್ನು ಹಚ್ಚಬೇಕಾಗುತ್ತದೆ.

| | |
|---|---|
| *The* warlike *Bhima* | ರಣವೀರನಾದ ಭೀಮಸೇನನು. |
| *The* philanthropic *Karna* | ಪರೋಪಕಾರಿಯಾದ ಕರ್ಣನು. |

Great ಎಂಬದು ಬಿರುದು ಇದ್ದರೆ, the great ಎಂಬ ಶಬ್ದಗಳು ಅಂಕಿತನಾಮದ ಮುಂದೆ ಬರುತ್ತವೆ. ಉದಾ—

Alexander *the* Great ಪ್ರತಾಪಶಾಲಿಯಾದ ಅಲೆಕ್ಝಾಂಡರನು.

೧೬೧ ಯಾವನಾದರೊಬ್ಬ ಪ್ರಸಿದ್ಧ ಪುರುಷನ, ಇಲ್ಲವೆ ಯಾವದಾದರೊಂದು ಪ್ರಸಿದ್ಧ ವಸ್ತುವಿನ ಸಾಮ್ಯತೆ ಕೊಡುವದಕ್ಕಾಗಿ ಒಮ್ಮೊಮ್ಮೆ ಅಂಕಿತನಾಮದ ಹಿಂದೆ the ಎಂಬ ಉಪಪದವನ್ನು ಹಾಕುವರು. ಉದಾ—

Kalidasa is *the* Shakespeare of India ಕಾಲಿದಾಸನು ಹಿಂದುಸ್ತಾನದ ಶೇಕ್ಸಪೀಯರನು.

ಅಂದರೆ, ಇಂಗ್ಲಿಷ ಜನರೊಳಗೆ ಮೇಲಾದ ಕವಿಯು ಹ್ಯಾಗೆ ಶೇಕ್ಸಪೀಯರನೋ ಹಾಗೆ ಹಿಂದೂ ಜನರೊಳಗೆ ಕಾಲಿದಾಸನು. ಆದರೆ ಹಿಂದುಸ್ತಾನದ ಎಂಬ ಶಬ್ದವನ್ನು ಬಿಟ್ಟು ಕಾಲಿದಾಸನು ಶೇಕ್ಸಪೀಯರನಷ್ಟು ಯೋಗ್ಯತೆಯುಳ್ಳವನು ಅನ್ನುವದಾದರೆ—

Kalidasa is another ( or like ) Shakespeare ಕಾಲಿದಾಸನು ಪ್ರತಿಶೇಕ್ಸಪೀಯರನು.

Kalidasa is our Shakespere ಅಂದರೆ, ನಮ್ಮ ಕವಿರಾಜನು ಕಾಲಿದಾಸನು.

೧೬೨ ಇಂಥ ಗ್ರಂಥಕಾರನ ಇಂಥ ಪುಸ್ತಕವು ಎಂದು ಅನ್ನುವ ರೀತಿಗಳು ಎರಡು—Kalidasa's *Shakuntala* ಅಥವಾ *the Shakuntala* of Kalidas; Bhavabhuti's *Malati-Madhav* ಅಥವಾ *the Malati-Madhav* of Bhavabhuti.

1) ಭಾಷಾಂತರ ಪಾಠಮಾಲೆ, ಪುಸ್ತಕ ೧ ಕಲಮು ೬೫ ನೋಡು.

೧೬೩ 'ಇಂಥ ಜನಾಂಗದವರು' ಅನ್ನುವದಾದರೆ, ಹೆಸರಿನ ಹಿಂದೆ the ಎಂಬ ಉಪಪದವನ್ನು ಹಾಕಬೇಕು. ಹೇಗಂದರೆ— *the* English ಇಂಗ್ಲಿಷ ಜನರು, *the* Russians ರೂಸ ಜನರು, *the* Hindus ಹಿಂದೂ ಜನರು, *the* Parsis ಪಾರ್ಸೀ ಜನರು, *the* Mussulmans ಮುಸಲ್ಮಾನರು ಇತ್ಯಾದಿ ಆದರೆ ಎಷ್ಟೋ ಹೆಸರುಗಳಿಗೆ men ಎಂಬ ಶಬ್ದವನ್ನು ಕೂಡಿಸುತ್ತಾರೆ. ಆಗ the ಎಂಬದು ಆವಶ್ಯವಿಲ್ಲ. ಹೇಗಂದರೆ—Englishmen, Dutchmen, Irishmen, Frenchmen, ಮುಂತಾದವುಗಳು; ಆದರೆ ಯಾವತ್ತು ಹೆಸರುಗಳಿಗೆ men ಎಂಬ ಶಬ್ದವನ್ನು ಹಚ್ಚಬಹುದೆಂದು ತಿಳಕೂಡದು

☞ *The* Englishmen { ೧ ಇಂಗ್ಲಿಷ ಜನರು.
೨ (ಆ) ಇಂಗ್ಲಿಷ ಮನುಷ್ಯ.

*An* Englishman (ಒಬ್ಬ) ಇಂಗ್ಲಿಷ ಮನುಷ್ಯ.

೧೬೪ ಭಾಷೆಗಳ ಹೆಸರುಗಳನ್ನು ಹೇಳುವ ರೀತಿಗಳು ಎರಡು; ಹೇಗಂದರೆ—English ಇಲ್ಲವೆ the English language ಇಂಗ್ಲಿಷ ಅಥವಾ ಇಂಗ್ಲಿಷ ಭಾಷೆ; Kannada ಇಲ್ಲವೆ the Kannada language ಕನ್ನಡ ಅಥವಾ ಕನ್ನಡ ಭಾಷೆ ಇತ್ಯಾದಿ.

೧೬೫ The ಎಂಬದರ ಮುಂದೆ ಬರೇ ವಿಶೇಷಣವಿದ್ದರೆ, ಆ ತರದ ಜನರು ಎಂಬ ಅರ್ಥವಾಗುತ್ತದೆ. ವಿಶೇಷಣದ ಹಿಂದೆ the ಇದ್ದರೆ, ಮುಂದೆ ನಾಮಪದವು ಆವಶ್ಯವಿಲ್ಲ. ನಾಮವನ್ನಿಟ್ಟರೆ, the ಎಂಬದನ್ನು ಬಿಟ್ಟು ಬಿಡಬಹುದು.

*The virtuous* alone are happy — ಸದ್ಗುಣವುಳ್ಳವರೇ ಸೌಖ್ಯದಿಂದಿರುತ್ತಾರೆ.

*The rich* = rich persons — ಶ್ರೀಮಂತರು.

☞ Rich persons, ಇಲ್ಲವೆ the rich, — ಶ್ರೀಮಂತರು.

*The* rich persons — (ಆ) ಶ್ರೀಮಂತರು.

೧೬೬ ನದಿ, ಸಮುದ್ರ, ಮಹಾಸಾಗರ, ನಡುಗಡ್ಡೆಗಳ ಸಮೂಹ, ಪರ್ವತಾವಳಿ, ಇವುಗಳ ಹೆಸರಿನ ಹಿಂದೆಯೂ, ದೇಶಗಳ ವರ್ಣನಾತ್ಮಕ ಹೆಸರುಗಳ ಹಿಂದೆಯೂ the ಎಂಬ ಉಪಪದವನ್ನು ಹಾಕಬೇಕು.

೧೬೭ ಖಂಡಗಳು, ದೇಶ, ನಡುಗಡ್ಡೆ, ಒಂದೇ ಪರ್ವತ, ಭೂಶಿರಗಳ ಹೆಸರುಗಳ ಹಿಂದೆ ಉಪಪದವು ಬೇಡ.

೧೬೮ ಎಷ್ಟೋ ಶಬ್ದಗಳ ಹಿಂದೆ the ಎಂಬ ಉಪಪದವನ್ನು ಹಾಕುವ ಪರಿಪಾಠವುಂಟು. ಹೇಗಂದರೆ— *the* sun, *the* moon, *the* sky, *the* world, *the* earth, *the* west, *the* east, *the* north, *the* south, *the* Ve'das, *the* Bible, *the* Koran ಮುಂತಾದವುಗಳು.

೧೬೯ I saw cow in field ಎಂಬ ಅಶುದ್ಧ ವಾಕ್ಯವನ್ನು ನಾಲ್ಕು ರೀತಿಯಿಂದ ಶುದ್ಧ ಮಾಡಬಹುದು.

I saw *a* cow in *a* field ನಾನು (ಒಂದು) ಹೊಲದೊಳಗೆ (ಒಂದು) ಆಕಳ ಕಂಡೆನು.

I saw *the* cow in *the* field ನಾನು ( ಆ ) ಹೊಲದೊಳಗೆ ( ಆ ) ಆಕಳ ಕಂಡೆನು.

I saw the cow in *a* field ನಾನು (ಆ) ಆಕಳು (ಒಂದು) ಹೊಲದೊಳಗೆ ಕಂಡೆನು.

I saw *a* cow in *the* field ನಾನು (ಆ) ಹೊಲದೊಳಗೆ (ಒಂದು) ಆಕಳು ಕಂಡೆನು.

## ೧೭೦ ಶಬ್ದಸಂಗ್ರಹ ೨೬.

| | | | |
|---|---|---|---|
| A ves'sel | ಹಡಗು. | In-ex-pe'ri-enced | ಅನುಭವವಿಲ್ಲದ, ಅನನುಭವಿ. |
| A u'sage | ನಡಾವಳಿ, ಪದ್ಧತಿ. | The stage | ರಂಗಸ್ಥಳ. |
| Ci'vilised | ಸುಧಾರಿಸಿದ, ಸುಸಂಸ್ಕೃತ, ಶಿಷ್ಟಪಾಟಾದ, | Finance' | ಕಂದಾಯ. |
| A ewe | ಹೆಣ್ಣು ಕುರಿ. | A ri'val | ಪ್ರತಿಸ್ಪರ್ಧಿ. |
| Charm'ing | ಮನೋಹರ, ರಮಣೀಯ. | A states'man | ರಾಜನೀತಿ ಕುಶಲ. |
| A min'is-ter | ಮಂತ್ರಿ. | Out-wit | ತೆಕ್ಕು ಹಚ್ಚು, ಮೇಲಾಗು, ಮೋಸ ಮಾಡು. |
| Be-loved' | ಪ್ರಿಯ, ಜೀವದ. | ಉಪಸಾಗರ | a bay. |
| ಗುರುತು, ಪರಿಚಯ | an ac-quaint'ance. | ಪರ್ವತ, ಶಿಖರ | a peak, the top of a mount'ain. |
| ಪುಸ್ತಕ ಮಾರುವವ | a book-sel-ler. | | |

| | |
|---|---|
| A domes'tic an'i-mal | ಸಾಕಿದ ಪಶು. |
| To ob-serve' a u'sage | ಪದ್ಧತಿಯಂತೆ ನಡೆ. |
| To be at table<br>To be at din'ner<br>To sit down to din'ner | ಊಟಕ್ಕೆ ಕೂಡ್ರು. |
| To be at work | ಕೆಲಸದೊಳಗಿರು, ಕೆಲಸ ಮಾಡುತ್ತಿರು. |
| A warm friend | ಒಳ್ಳೇ ಸ್ನೇಹಿತ. |
| A bit'ter en'emy | ಕಡು ವೈರಿ. |
| ದಿನಕ್ಕೆ ಮೂರು ಸಾರಿ | thrice, or three times a day. |
| ಮೂರು ರೂಪಾಯಿಗೆ ಒಂದರಂತೆ | hree rupees a (or, per) yard. |

ಭಾಷಾಂತರಪಾಠ ೨೬.

೧೭೧ The horse is a domestic animal. A horse is a useful animal. This is a usage that is observed by all civilised nations. We have bought a ewe. A beloved friend may become a bitter enemy. An elephant is much larger than a horse. You are an hour behind your time. An honest servant is of great value. This is a degree of honesty which is not met with[1] every day. Shakespeare was one of the greatest poets that the world has ever produced. Paris is not a place for an inexperienced youth[2] The Danube, the largest river in Germany falls into the Black Sea. Arab horses are considered the best in the world. Plantains are more wholesome than guavas, The plantains on that tree are quite ripe, they must be gathered. The rose is the sweetest flower that grows. This vessel is now going to the Wet Indies, it ts not going to Caylon. I study English four times a week He was born prince[3] and died a beggar. He spent a part of his life in India. In less than three minutes, a part of the roof and ceiling fell in over their heads. Wales is a part of Great Britain. Did ever a woman look more charming than she did on the stage last night? We were just at table. Breakfast is on the table. The labourers were at work the whole day. He will no longer be able to do anything with impunity.

We shook hands and then parted. He is on duty[4]. I heard a part of their conversation. Never was a man more hated than the minister of fiances. When was Nepoleon made Emperor? They made him king. He was made king. I have a headache. It is a great pity[5]. I have never seen so large a tree as this. How charming[6] a child it is! What a charming[6] child it is! He is as good a man as you. So good a citizen, so brave a soldier, so warm a friend, so kind a a father,

1) To meet with=to find ಕಂಡುಬರು. 2) Youth=a young man ತರುಣನು. 3) ಅವನು ರಾಜಕುಲದಲ್ಲಿ ಹುಟ್ಟಿದವನು. 4) ಅವನು ಕೆಲಸದ ಮೇಲೆ ಹಾಜರಿದ್ದಾನೆ. 5) ಬಹು ದುಃಖಕರವಾದ ಮಾತು. 6) ಮುದ್ದು ಮಗುವು.

**and so generous a friend to the poor, will never be found again. The French were rivals to the English in India for a long time, He paid me double the price I asked I have bought half a dozen stockings at half a rupee for a pair[1]. He studied the English language without a master, Darkness and tempest make the night doubly dismal. My horse ran double the distance in the same time. Are these gentlemen Germans? No, sir, they are not. Some of them are Englishmen, some are Dutchmen; and a few are Irishmen. The English have had many great statesmen Fetch me a couple of oranges. These stockings belong to different pairs. She sold the mangoes by dozens. He gave me two five-pound notes[2], for a new-year's gift. Although he is so young, he has some grey hair in his whiskers. The Hindus have dark hair. Are you going to play us false[3]?**

ಒಬ್ಬನಿಗೆ ಸಾವಿರಾರು ಮಂದಿ ಗುರುತಿನವರಿರುತ್ತಾರೆ. ಆದರೆ ಅವರೊಳಗೆ ಸ್ನೇಹಿತನು ಒಬ್ಬನೂ ಇರುವದಿಲ್ಲ. ವಿದ್ಯೆಯು ಬಡವರ ಸಂಪತ್ತು, ಶ್ರೀಮಂತರಿಗೆ ಭೂಷಣವು. ವಜ್ರಗಳು ಬಹಳ ಬೆಲೆಯುಳ್ಳವು ಇರುತ್ತವೆ. ಸಿಂಹವು ಮೃಗಗಳ ಅರಸು. ಸೋಮವಾರ, ಗುರುವಾರ ಇವೆರಡು ದಿವಸ ನನಗೆ ಬಹಳ ಕೆಲಸವಿರುತ್ತದೆ[4]. ನೀನು ಈ ಔಷಧವನ್ನು ದಿವಸಕ್ಕೆ ಮೂರು ಸಾರೆ ತಕ್ಕೊಳ್ಳಬೇಕು. ಈ ಬಟ್ಟೆಯು ಮೂರು ರೂಪಾಯಿಗೆ ವಾರು ಇರುತ್ತದೆ. ಅವನ ಆದಾಯವು ವರ್ಷಕ್ಕೆ[5] ಎರಡು ಸಾವಿರ ರೂಪಾಯಿ ಅದೆ. ಮೈಸೂರು ರಾಜ್ಯವು ಭಾರತದ ಒಂದು ಭಾಗವು. ಅವನು ತನ್ನ ಆಯುಷ್ಯದ ಕೆಲವು ಕಾಲವನ್ನು ಒಳ್ಳೇ ಸೌಖ್ಯದಲ್ಲಿ[6] ಕಳೆದನು. ಕತ್ತಲೆ ಬಿದ್ದದರಿಂದ ನಮಗೆ ಹಾದಿ ಸಿಗಲೊಲ್ಲದು. ಹುಡುಗರಿಗೆ ಹೊಲಸಿನೊಳಗೆ ಹೋಗಬೇಡಿರೆಂದು ಹೇಳು. ಅವನ ತಂದೆಯು ಪುಸ್ತಕ ಮಾರುತ್ತಿದ್ದನು. ಸೂರ್ಯನು ಮೂಡಣದಲ್ಲಿ ಮೂಡಿ ಪಡುವಣದಲ್ಲಿ ಮುಳುಗುತ್ತಾನೆ. ಚಂದ್ರನು ಸಹ ಹಾಗೆ ಮಾಡುತ್ತಾನೆ. ಪೃಥ್ವಿಯು ದುಂಡಗದೆ, ಮತ್ತು ಅದು ಸೂರ್ಯನ ಸುತ್ತಮುತ್ತಲು ತಿರುಗುತ್ತದೆ. ರೋಮನ್ ಜನರು ಅನೇಕ ರಾಷ್ಟ್ರಗಳನ್ನು ವಶಮಾಡಿಕೊಂಡರು, ಆದರೆ ಜರ್ಮನ್ ಜನರನ್ನು ವಶ

1) The pair, for the pair ಜೋಡಿಗೆ. 2) ಐದೈದು ಪೌಂಡಿನ ಎರಡು ನೋಟುಗಳನ್ನು. 3) ನನಗೆ ಮೋಸು ಮಾಡುತ್ತೀಯಾ? 4) Are my busiest days. 5) A year. 6) Very happily.

ಮಾಡಿಕೊಳ್ಳಲಿಲ್ಲ. ನಮ್ಮ ತಂದೆಯು ನನಗೆ ಅನೇಕ ಜೋಡು ಕಾಲುಚೀಲಗಳನ್ನೂ ಎರಡು ಡಜನ್ ಕೈವಸ್ತ್ರಗಳನ್ನೂ ಕಳುಹಿದ್ದಾನೆ. ನೀವು ಒಳ್ಳೇ ಹೊತ್ತಿಗೆ ಬಂದಿರಿ[1]. ಪ್ರತಾಪಶಾಲಿಯಾದ ಆಲಫ್ರೆಡನೆಂಬ ಅರಸು ೮೭೧ ನೇ ಇಸವಿಯಿಂದ ೯೦೧ ರ ವರೆಗೆ ಇಂಗ್ಲಂಡ ದೇಶವನ್ನು ಆಳಿದನು[2]. ಈ ಮನುಷ್ಯನು ಪ್ರತಿ ಕರ್ಣನು. ನೀವು ಸರ್ವಜ್ಞನ ವಚನವನ್ನು ಓದಿದ್ದಿರಾ? ನಾವು ಹೋದ ವರ್ಷ ವಾಲ್ಮೀಕಿ ರಾಮಾಯಣವನ್ನು ಓದಿದ್ದೆವು. ಹಿಂದು, ಮುಸಲ್ಮಾನ, ಕ್ರಿಶ್ಚನ್ನ, ಫಾರ್ಸಿ ಮುಂತಾದ ಎಲ್ಲರೂ ಭಾರತದ ಪ್ರಜೆಗಳು. ನಾನು ಇಂಗ್ಲಿಷ ಭಾಷೆಯನ್ನು ಕಲಿಯತಕ್ಕವನಿದ್ದೆನೆಂಬದು ನಿಜವು. ಆದರೆ ಯಾವದೋ ಒಂದು ಕಾರಣದಿಂದ ನನ್ನ ಇಚ್ಛೆ ಕೈಗೂಡಲಿಲ್ಲ. ಶ್ರೀಮಂತರು ಬಡವರಿಗೆ ಸಹಾಯ ಮಾಡಬೇಕು. ಗಂಗಾನದಿಯು ಬಂಗಾಲ ಉಪಸಾಗರಕ್ಕೆ ಕೂಡುತ್ತದೆ. ಹಿಮಾಲಯ ಪರ್ವತದ ಅತಿ ಉನ್ನತವಾದ ಶಿಖರವು ಗೌರೀಶಂಕರ ಎಂಬದು; ಅದು ಸುಮಾರು ಐದೂವರೆ ಮೈಲು ಎತ್ತರವದೆ. ಕಾಂಚನಗಂಗಾ, ಧವಲಗಿರಿ ಎಂಬವು ಅದೇ ಪರ್ವತದ ಬೇರೆ ಉನ್ನತವಾದ ಶಿಖರಗಳು; ಅವಾದರೂ ಸುಮಾರು ಗೌರೀಶಂಕರದಷ್ಟೇ ಎತ್ತರವಾಗಿವೆ. ಏಶಿಯಾ ಖಂಡವು ಯುರೋಪ ಖಂಡಕ್ಕಿಂತ ಬಹಳ[3] ದೊಡ್ಡದು. ಅವನು ಈ ಪುಸ್ತಕಗಳನ್ನು ನಾಲ್ವತ್ತು ಪೈಸೆಗಳಿಗೆ[4] ಒಂದರಂತೆ ಮಾರುತ್ತಾನೆ. ನಾನು ಈ ಪುಸ್ತಕವನ್ನು ನಾಲ್ವತ್ತು ಪೈಸೆಗಳಿಗೆ[5] ಕೊಂಡೆನು. ಗೋವಿಂದಾ, ನಿನ್ನ ತಮ್ಮನಿಗೆ ಈವೊತ್ತು ಏನಾಗಿದೆ[6]? ಅವನು ಲೆಕ್ಕಣಿಕೆ ಕೆತ್ತುವಾಗ ಚಾಕುವಿನಿಂದ ತನ್ನ ಬೆರಳು ಕೊಯ್ದುಕೊಂಡನು[7]. ರಾಮನು ಎಲ್ಲಿ ಇದ್ದಾನೆ? ನನಗೆ ನಿಶ್ಚಯವಾಗಿ ಗೊತ್ತಿಲ್ಲ; ಒಂದುವೇಳೆ ಅವನು ಆಚೆಯ[8] ಕೋಣೆಯೊಳಗೆ ಇರಬಹುದು; ಇಲ್ಲವೆ ತೋಟದೊಳಗೆ ಇರಬಹುದು. ನಾನು ಒಂದು ಚಾಳೀಸು ಕೊಳ್ಳಬೇಕಾಗಿದೆ. ನಾನು ನಿನ್ನೆ ಒಂದು ಕತ್ತರಿ ಕೊಂಡೆನು.

---

## ೧೯ ನೇ ಪಾಠ.

### ಪೂರ್ಣ ಭೂತಕಾಲ.

### Pluperfect.

೧೭೨ ಭೂತಕಾಲದಲ್ಲಿ ಆದ ಒಂದು ಕ್ರಿಯೆಗಿಂತ ಇಲ್ಲವೆ ಹೇಳಿದ ವೇಳೆಗಿಂತ ಮುಂಚಿತವಾಗಿ ಮುಗಿದು ಹೋದಂಥ, ಹಾಗು ಅದಕ್ಕೆ ಸಂಬಂಧಿಸಿರು

---

1) You have come just in time. 2) Ruled over. 3) Much, considerably. 4) At forty paisee. 5) For forty pais. 6) Govinda, what is the matter with your brother to-day? 7) He cut his finger etc. 8) Next.

ಷಂಥ ಮತ್ತೊಂದು ಕ್ರಿಯೆಯನ್ನು ತೋರಿಸುವದಾದರೆ ಪೂರ್ಣಭೂತಕಾಲವನ್ನು ಪ್ರಯೋಗಿಸಬೇಕು. ಉದಾ—

I *had* written the letter before he came ಅವನು ಬರುವದಕ್ಕಿಂತ ಮುಂಚೆ ನಾನು ಪತ್ರಾ ಬರೆದಿದ್ದೆನು.

He *had left* the house before ten o'clock ಹತ್ತು ಗಂಟೆಗಿಂತ ಮುಂಚೆ ಅವನು ಮನೆ ಬಿಟ್ಟಿದ್ದನು.

೧೭೩ ಈ ಕಾಲದ ರೂಪಗಳು ಹೇಗಾಗುತ್ತವೆಂಬುದನ್ನು ಮುಂದಿನ ಉದಾಹರಣಗಳ ಮೇಲಿಂದ ತಿಳಿದುಕೊಳ್ಳಬೇಕು.

### To write ಎಂಬದರ ಪೂರ್ಣಭೂತಕಾಲ.

### ಕರ್ತರಿ ಪ್ರಯೋಗ.

| | *Singular* | *Plural* |
|---|---|---|
| *1st person* | I had written | We had written. |
| *2nd per* | Thou hadst written | You had written. |
| *3rd per* | He had written | They had written. |

### To call ಎಂಬದರ ಪೂರ್ಣಭೂತಕಾಲ.

### ಕರ್ಮಣಿ ಪ್ರಯೋಗ.

| | | |
|---|---|---|
| *1st person* | I had been called[1] | We had been called. |
| *2nd per* | Thou hadst been called | You had been called. |
| *3rd per* | He had been called | They had been called. |

೧೭೪ ಇಂಗ್ಲೀಷಿನೊಳಗೆ I had been writing ಎಂಬದೊಂದು ಕಾಲವುಂಟು, ಅದಕ್ಕೆ ಕನ್ನಡದಲ್ಲಿ ಹೆಸರು ಇಲ್ಲ. ಅದರ ಅರ್ಥವು ಏನಾಗುತ್ತದೆಂದರೆ, ಭೂತಕಾಲದಲ್ಲಿ ಇಂಥ ವೇಳೆಯಲ್ಲಿ ಇಂಥ ಕ್ರಿಯೆಯು ಮೊದಲಿನಿಂದ ಕೆಲವು ಹೊತ್ತು ನಡೆಯುತ್ತ ಬಂದಿತ್ತು, ಆಗ ಅದು ಮುಗಿದಿತ್ತೋ ಇಲ್ಲವೋ ತಿಳಿಯದು. ಈ ಕಾಲದ ರೂಪಗಳನ್ನು ಮುಂದಿನ ಉದಾಹರಣಗಳಿಂದ ತಿಳಿದುಕೊಳ್ಳಬೇಕು.

---

1) ನಾನು ಕರೆಯಲ್ಪಟ್ಟದ್ದೆನು, ಅಂದರೆ ಕರೆದಿದ್ದರು.

## To Write.

| | *Singular.* | *Plural.* |
|---|---|---|
| *1st person* | I had been writing | We had been writing. |
| *2nd person* | Thou hadst been writing | You had been writing. |
| *3rd person* | He had been writing | They had been writing. |

I *had been writing* letters before he came ಅವನು ಬರುವದಕ್ಕಿಂತ ಮುಂಚೆ ನಾನು ( ಕೆಲವು ಹೊತ್ತಿನಿಂದ ) ಪತ್ರಗಳನ್ನು ಬರೆಯುತ್ತ ಕೂತಿದ್ದೆನು.

ಇಂಗ್ಲೀಷಿನಲ್ಲಿ ಈ ಕಾಲದ ಕರ್ಮಣಿ ಪ್ರಯೋಗವು ಆಗುವದಿಲ್ಲ.

೧೭೫ ಕನ್ನಡದೊಳಗೆ ಎಲ್ಲೆಲ್ಲಿ ಪೂರ್ಣ ಭೂತಕಾಲವನ್ನು ಪ್ರಯೋಗಿಸುವರೋ ಅಲ್ಲಲ್ಲಿ ಇಂಗ್ಲೀಷಿನೊಳಗೆ ಯಾವಾಗಲೂ ಅದೇ ಕಾಲವನ್ನು ಪ್ರಯೋಗಿಸಕೂಡದು. ಉದಾ—

ನಾನು ಅವನ ಮನೆಗೆ ಹೋಗಿದ್ದೆನು; ಆದರೆ ಅವನು ಮನೆಯೊಳಗೆ ಇದ್ದಿಲ್ಲ. I *went* to his house but he was not at home.

☞ ಈ ಬಗ್ಗೆ ಚನ್ನಾಗಿ ನೆನಪಿನಲ್ಲಿಡತಕ್ಕದ್ದೇನೆಂದರೆ, ಭೂತಕಾಲದಲ್ಲಿ ಇಂಥ ವೇಳೆಗಿಂತ ಮುಂಚೆ ಈ ಕ್ರಿಯೆಯು ಮುಗಿದಿತ್ತು ಎಂಬದಾಗಿ ಸ್ಪಷ್ಟಾರ್ಥವಿದ್ದ ಹೊರತು, ಇಂಗ್ಲೀಷಿನೊಳಗೆ ಪೂರ್ಣ ಭೂತಕಾಲವನ್ನು ಎಂದಿಗೂ ಪ್ರಯೋಗಿಸಬಾರದು. ಕೇವಲ ಕನ್ನಡದೊಳಗೆ ಪೂರ್ಣ ಭೂತಕಾಲ ಉಂಟೆಂಬ ಕಾರಣದಿಂದ ಇಂಗ್ಲೀಷಿನೊಳಗೆ ಆ ಕಾಲವನ್ನು ಹಾಕಕೂಡದು. ಮೇಲೆ ಹೇಳಿದ ಅರ್ಥವು ಹೊರಡದಿದ್ದರೆ, ಇಂಗ್ಲೀಷಿನೊಳಗೆ ಶುದ್ಧ ಭೂತಕಾಲವನ್ನೇ ಪ್ರಯೋಗಿಸಬೇಕು.

### ೧೭೬ ಶಬ್ದಸಂಗ್ರಹ ೨೭.

| | | | |
|---|---|---|---|
| Hon'our | ಸನ್ಮಾನ, ದೊಡ್ಡಿಸ್ತನ, ಗೌರವ. | A ben-e-fac'tor | ಉಪಕಾರ ಮಾಡುವವ, ಕಲ್ಯಾಣಕರ್ತ. |
| Rainy | ಮಳೆಯು. | | |
| O-bli'ging | ಪರೋಪಕಾರಿ, ಉಪಕಾರಶೀಲ. | A thun'der-storm | ಗುಡುಗು, ಮಿಂಚಿನ ಮಳೆ. |
| A print'ing of'fice | ಛಾಪಖಾನೆ, ಅಚ್ಚುಕೂಟ, ಮುದ್ರಣಾಲಯ. | Dam'age | ಕೇಡು, ಅಪಾಯ. |
| | | A keep'er | ಕಾವಲುಗಾರ. |
| A sheet (of paper) | ಹಾಳೆ, ತಾವು. | Hor'ribly | ಭಯಂಕರವಾಗಿ. |

| | | | |
|---|---|---|---|
| To con-tinue | ಸಾಗಿಸು, ಮುಂದುವರಿಸು. | A baw'ble | ಕ್ಷುಲ್ಲಕವಾದ, ನೋಟದ ವಸ್ತು, ಆಟದ ಒಡವೆ. |
| Ri-dic'ulous | ಅಪಹಾಸ್ಯಕರವಾದ, ನಗೆಗೇಡಿತನ. | To re-gret' | ದುಃಖಪಡು. |
| A map | ನಕಾಶೆ. | A brin'jal | ಬದನೇಕಾಯಿ. |
| ಚಕ್ಕೆ | a chip of wood. | ಪೂರ್ವಜರು | fore'fath-ers, an ces-tors |

| | |
|---|---|
| To de-prive' a man of | ಒಬ್ಬರ (ಒಡವೆ) ಕಸಕೊಳ್ಳು, ಅಪಹರಿಸು. |
| It was rain'y | ಮಳೆ ಸುರಿಯುತ್ತಿತ್ತು. |
| It got clear | (ಆಕಾಶವು) ನಿರಭ್ರವಾಯಿತು. |
| To con-tin'ue to play | ಆಟಾ ಸಾಗಿಸು. |
| To judge oth'ers | ಅನ್ಯರನ್ನು ಕುರಿತು ನಿರ್ಣಯಿಸು. |
| A fire broke out | ಬೆಂಕಿ ಹತ್ತಿತು. |
| To watch (a man) | ನೋಡುತ್ತಿರು, ಪಾಳತಿ ಮಾಡು, ಕಾಯು. |
| So ver'y long, te'di-ous | ಬಹಳ ಉದ್ದ, ಬೇಸರಗೊಳಿಸುವ. |
| ಪರಿಚಯವಾಗು | to know, to become' acquaint'ed with. |
| ಬಹಳ ಉದ್ದ, ರಗಳೆಯು | long, pro'lix, te-di-ous. |
| ನನ್ನ ಮನಸ್ಸು ತಿರುಗಿತು | I changed my mind. |
| ನನ್ನ ಆಲೋಚನೆ ಬೇರೆಯಾಯಿತು; ನಾನು ಬೇರೆ ತಿಳಿದುಕೊಂಡೆನು | I thought oth'er-wise. |
| ನಾನು ಅಡಿತೋರಿಸಲಾರೆನು | I can'not express. |
| ಅವನ ಮೋರೆಯ ಮುಂದೆ, ಎದುರು | to his face. |
| ತನ್ನ ಹೆಸರು ಮಾಡು, ಪ್ರಸಿದ್ಧಿಗೆ ಬರು | to make one's self fa'mous. |
| ಅವನಿಗೆ ನಿದ್ದೆ ಹತ್ತಿತು | he fell a-sleep. |
| ಸುಡುತ್ತಾ ಇರು | to be on fire. |
| ಬೆಂಕಿ ಹತ್ತು | to take fire, to catch fire. |
| ಸಿಟ್ಟಿಗೇಳಬೇಡ | do not get an'gry. |
| ಎಂದಿನಿಂದ ? | how long ? |

### ಭಾಷಾಂತರಪಾಠ ೨೭.

೧೭೭ A man may be deprived of honour and riches, but not of virtue against his will. After we *had finished* our work, we generally played together, or walked to some distant village to enjoy the fresh air. I copied my letter again, because I *had made* many mistakes in it. I *had been watching* him for a long time without being observed by him. While the book was being printed. a fire broke out in the

printing office which destroyed all the sheets that *were (or had been) finished.* It is said that the last thunder-storm caused a great deal of damage. When the keeper awoke, he found that the prisoner *had escaped.* The sun *had risen* before I reached the village. Not a sound was to be heard[1] although many hundreds of people were in the hall. We have now done enough[2]. We have worked long enough. This exercise is easy enough[3], only it is so very long. You do not read enough[4]. They very much regretted that they *had spent* so much money in such useless bawbles. He came to *see* us yesterday. After he *had been* nine months in Bombay, he went to Surat. Just as my parents were about to go into the country, my mother bacame (was taken) ill and so they were obliged to remain in the town. Although it was so rainy in the morning It got beauitfully clear in the after-noon, You may continue to play for half an hour, but then you must come in, to learn your lessons. I am very much obliged to you for your kind offer. Let us be kind and obliging to our fellow men, and they will rarely be otherwise to us. People, who praise themselves, make themselves ridiculous. I had no time to learn the whole poem. If he continues thus[5], he will certainly be a great man one of these days[6], Your duty is to be obedient whether others be[7] so, or not. It is easy to judge others Always be greatful to your parents and benefactors, for ingratitude is a vice that every one despises. The children were playing in the garden while we took a walk in the fields. Early to bed and early to rise makes a man, healthy, wealthy and wise.

1) ಒಂದಿಷ್ಟು ಸದ್ದು ಸಹ ಕೇಳಬರುತ್ತಿದ್ದಿಲ್ಲ. 2) ಈಗ ನಾವು ಮಾಡಿದ ಕೆಲಸವು ಸಾಕು. 3) ಸುಲಭವೇ ಸರಿ. 4) ಬಹಳ, ಎಷ್ಟು ಓದಬೇಕೋ ಅಷ್ಟು. 5) ಹೀಗೇ ನಡೆದರೆ ಅವನು 6) [illegible] 7) [illegible]

ಆವನ ಪರಿಚಯವು ನನಗೆ ಹೆಚ್ಚೆಚ್ಚು ಆದ ಹಾಗೆ ಅವನು ನನಗೆ ಹೆಚ್ಚೆಚ್ಚು ಸೇರುತ್ತಾನೆ[1]. ನೀನು ನನಗೆ ಯಾವಾಗಲೂ ಪತ್ರಗಳನ್ನು ಕಳುಹುತ್ತಿರಬೇಕು; ಆದರೆ ಅವು ಬೇಸರಗೊಳಿಸುವಂಥ[2] ವಿರಬಾರದು. ನನಗೆ ಹಿಂದುಸ್ತಾನದ ಹೊಸ ನಕಾಶ ಬೇಕು, ನಿನ್ನ ಹತ್ತರ ಉಂಟೋ? ಅವನಿಗೆ ಇಂಗ್ಲೀಷು ಬರುತ್ತದೆ. ಅವನು ಬೇನೆಯುವನ ಸೋಗು[3] ಮಾಡುತ್ತಾನೆ. ಆಕೆಯು ಆ ಚಕ್ಕೆಯನ್ನು ಕೈಯಲ್ಲಿ ತಕ್ಕೊಂಡು ಆದರ ಮೇಲೆ ಬರೆದದ್ದನ್ನು ಓದಿ ನೋಡಿದಳು. ಅವನು ಬರುವದಕ್ಕೆ ಮುಂಚೆ ಬಹಳ ಹೊತ್ತಿನಿಂದ ನಾನು ಅವನ ಹಾದೀ ನೋಡುತ್ತ ಕೂತಿದ್ದೆನು. ಬಹಳ ಹುಡುಗರು ತಮ್ಮ ಪಾಠಗಳನ್ನು (ತಯಾರು) ಮಾಡಿದ್ದಿಲ್ಲ[4]. ನಾನು ಅಲ್ಲಿ ಹೋದಾಗ ಬಹಳ ಜನರು ಬಂದಿದ್ದಿಲ್ಲ. ನನಗೆ ಅವನ ಮೇಲೆ ಸಂಶಯು ಬಂದದ್ದು ನಿಜ. ಆದರೆ ನೀವು ನನಗೆ ಹಾಗೆ ಮಾಡಲಿಕ್ಕೆ ಹೇಳುವ ದಕ್ಕಿಂತ ಮುಂಚೆ ನಾನು ಆವರ ವಿಷಯಕ್ಕೆ ಅವನಿಗೆ ಒಂದು ಮಾತು ಸಹ ಆಡಿದ್ದಿಲ್ಲ. ಅವನು ನನ್ನ ಭೆಟ್ಟಿಗೆ ಬಂದಾಗ ನಾನು ಉಂಡಿದ್ದಿಲ್ಲ. ನೀನು ಈವೊತ್ತು ಬೆಳಿಗ್ಗೆ ಎಲ್ಲಿ ಹೋಗಿದ್ದಿ[5]? ಇಲ್ಲ ಸ್ವಾಮೀ, ಎಲ್ಲಿಯು ಹೋಗಿದ್ದಿಲ್ಲ[6]. ನೀನು ರಾಮನ ಕೂಡ ಹೋಗಿದ್ದಿಯೋ? ನಾನು ಹೋಗತಕ್ಕವನಿದ್ದೆನು. ಅದರೆ ಹಿಂದುಗಡೆ ನನ್ನ ಮನಸ್ಸು ತಿರುಗಿತು. ನಾನು ಮೊದಲು ಹೋಗಬೇಕೆಂದು ಗೊತ್ತು ಮಾಡಿದ್ದು ನಿಜವು[7]. ಆದರೆ ಕಡೆಗೆ ನನ್ನ ಆಲೋಚನೆ ಬೇರೆಯಾಯಿತು. ನೀನು ಹೋಗಬೇಕೆಂದು ಗೊತ್ತು ಮಾಡಿದ್ದರೆ, ಯಾಕೆ ಹೋಗಲಿಲ್ಲ? ನೀವು ರಾಮನ ಮನೆಗೆ ಊಟಕ್ಕೆ ಹೋಗಿದ್ದಿರಾ? ನಾನು ಗೋವಿಂದನ ಮನೆಗೆ ಹೋದಾಗ ಅವನು ಹೊರಗೆ ಹೋಗಿದ್ದನು. ನಾನು ಬಂದಾಗ ಅವನು ಬಂದಿದ್ದಿಲ್ಲ. ಕಳ್ಳರು ಅವನ ಕೋಣೆಯೊಳಗೆ ಹೊಕ್ಕ ಸಮಯದಲ್ಲಿ ಅವನಿಗೆ ಗಡದ್ದು ನಿದ್ದೆ ಹತ್ತಿತ್ತು. ನನಗೆ ಆಗುವ ದುಃಖವನ್ನು ಹೇಳಕೂಡದು. ನಾನು ಇದನ್ನು ಅವನ ಮೋರೆಯ ಮುಂದೆ ಮಾತಾಡುವೆನು. ಅವನು ನನ್ನ ಹೆಸರು ಮಾಡಿದ್ದಾನೆ. ಅವನಿಗೆ ಪುಸ್ತಕ ಓದ ಓದುತ್ತ[8] ನಿದ್ದೆ ಹತ್ತಿತು. ಅವನ ಮನೆಗೆ ಬೆಂಕಿ ಹತ್ತಿರುತ್ತದೆ; ನನ್ನ ಮನೆಗೆ ಬೆಂಕಿ ಹತ್ತೀತೆಂದು ನಾನು ಹೆದರುತ್ತೇನೆ. ಆ ಬಡ ಪ್ರಾಣಿಯು[9] ಅನ್ನವಿಲ್ಲದೆ ಇಡೀ ದಿವಸ ಇದ್ದನು. ಈ ಕುದುರೆಗೆ ಸಂತೆಯಲ್ಲಿ ಏನು ಬೆಲೆ ಬಂದೀತು? ನಮ್ಮ ಪೂರ್ವಜರಷ್ಟು ನಾವು ಜಾಣರಲ್ಲ. ನಿಮಗೂ ಅವರಿಗೂ ಗುರುತಾಗಿ ಎಷ್ಟು ದಿವಸವಾಯಿತು? ನಾವು ನಗಚಾಟಿಕೆಯಿಂದ ಹೀಗೆ ಅಂದೆನು. ಸಿಟ್ಟಿಗೇಳಬೇಡ, ಇದಷ್ಟು ನಗೆ ಮಾತೇ ಸರಿ. ಅವನಿಗೆ ಯಾವಾಗಲೂ ಮೋಜು ಬೇಕು.

1) The more I know him, the more I like him. 2) Long ones. 3) To be ill. 4) Had not prepared ಇಲ್ಲಿ ಭೂತಕಾಲದಲ್ಲಿ. ಇಂಥ ಸಮಯಕ್ಕಿಂತ ಮುಂಚೆ ಎಂಬ ಅರ್ಥವು ಅನ್ವಯದಿಂದ ಹೊರಡುತ್ತದೆ. 5) Where did you go? 6) Did not go. 7) It is true that *etc.* 8) While he was reading the book. 9) The poor fellow.

# ೨೦ ನೇ ಪಾಠ.

## ಪೂರ್ಣಭವಿಷ್ಯತ್ಕಾಲ Future Perfect.

### ಕರ್ತರಿ ಪ್ರಯೋಗ Active Voice.

೧೭೮ *Singular.*

*1st person* I shall have written ನಾನು ಬರೆದಿರುವೆನು.
*2nd person* Thou wilt have written ನೀನು ಬರೆದಿರುವಿ.
*3rd person* He will have written ಅವನು ಬರೆದಿರುವನು.

*Plural.*

*1st person* We shall have written ನಾವು ಬರೆದಿರುವೆವು.
*2nd person* You will have written ನೀವು ಬರೆದಿರುವಿರಿ.
*3rd person* They will have written ಅವರು ಬರೆದಿರುವರು.

### ಕರ್ಮಣಿ ಪ್ರಯೋಗ Passive Voice.

*Singular.*

*1st person* I shall have been called {ನಾನು ಕರೆಯಲ್ಪಟ್ಟಿರುವೆನು, ಅಥವಾ ನನ್ನನ್ನು ಕರೆದಿರುವರು.
*2nd person* Thou wilt have been called ನೀನು ಇತ್ಯಾದಿ.
*3rd person* He will have been called ಅವನು ಇತ್ಯಾದಿ.

*Plural.*

*1st person* We shall have been called.
*2nd person* You will have been called.
*3rd person* They will have been called.

೧೭೯ ಅಪೂರ್ಣ ಭವಿಷ್ಯತ್ಕಾಲದಂತೆ ಪೂರ್ಣ ಭವಿಷ್ಯತ್ಕಾಲದ ರೂಪಗಳನ್ನಾದರೂ ರೂಢಿಯಲ್ಲಿ ಉಪಯೋಗಿಸುವದು ಬಹಳ ಕಡಿಮೆ. ಆದರೂ ಅವುಗಳ ಅವಶ್ಯವಿಲ್ಲೆಂದು ತಿಳಿಯಕೂಡದು.

೧೮೦ ಪೂರ್ಣಭವಿಷ್ಯತ್ಕಾಲಕ್ಕೆ ಬದಲಾಗಿ ಪೂರ್ಣವರ್ತಮಾನಕಾಲವನ್ನು ಹಾಕುವ ರೂಢಿಯು ಇಂಗ್ಲೀಷಿನೊಳಗೆ ಬಹಳ ಉಂಟು. ಉದಾ—

When you *have prepared* your lesson, you may go out for a walk. When you *shall have prepared etc.* ನಿನ್ನ ಪಾಠವು ಮುಗಿದಿತೆಂದರೆ ನೀನು ತಿರುಗಾಡಲಿಕ್ಕೆ ಹೋಗಬಹುದು = ನಿನ್ನ ಪಾಠವು ಯಾವಾಗ ಮುಗಿಯುವದೋ (ಮುಗಿದಿರುವದೋ) ಆಗ.

೧೮೧ ಒಮ್ಮೊಮ್ಮೆ ಇಂಗ್ಲೀಷಿನಲ್ಲಿ ಪೂರ್ಣ ಭವಿಷ್ಯತ್ಕಾಲಕ್ಕೆ ಬದಲಾಗಿ ವರ್ತಮಾನಕಾಲವನ್ನು ಹಾಕುವರು. ಉದಾ—

When you *return* from Poona = When you *shall have returned* from Poona ನೀನು ಪುಣೆಯಿಂದ ತಿರಿಗಿ ಬಂದಿ ಎಂದರೆ—ನೀನು ಯಾವಾಗ ಪುಣೆಯಿಂದ ತಿರುಗಿ ಬರುವಿಯೋ ( ಬಂದಿರುವಿಯೋ ) ಆಗ.

### ೧೮೨ ಶಬ್ದಸಂಗ್ರಹ ೨೮.

Ex'pen'sive, costly, dear — ತುಟ್ಟಿ, ಬಹಳ ಖರ್ಚಿನ.

Veg'etable-food — ಕಾಯಿಪಲ್ಯ, ಧಾನ್ಯಾದಿಗಳ ಆಹಾರ, ಮಾಂಸ ಬಿಟ್ಟು ಬೇರೆ ಆಹಾರ, ಶಾಕಾಹಾರ.

Whole'some — ಆರೋಗ್ಯ, ಹಿತಕರ, ನೆಮ್ಮದಿ ಆಗುವ.

An'imal food — ಮಾಂಸಾಹಾರ.

Ec-o nom'ical — ಮಿತಿಯಿಂದ ಖರ್ಚು ಮಾಡುವಂಥ.

Ex-ten'sive — ವಿಶಾಲ, ವಿಸ್ತೀರ್ಣ, ದೊಡ್ಡ.

A dun'geon ಸೆರೆಮನೆ, ಕತ್ತಲೆ ಕೋಣೆ.

To get dark ಕತ್ತಲಾಗು.

A peer'age — ಶ್ರೀಮಂತ ಪದವಿ, ಸರದಾರ ದರ್ಜೆ.

To ex-haust a subject — ಒಂದು ವಿಷಯವನ್ನು ಸಂಪೂರ್ಣವಾಗಿ ವಿವರಿಸು.

ಉದ್ಯೋಗವಿಲ್ಲದ, ಖಾಲಿ — Out of employment, without employ'ment, un-em-ployed.

ವ್ಯವಸ್ಥೆ ಚೆನ್ನಾಗಿರು — To be in a good order.

(ಗಡಿಯಾಲ) ಕೆಡು — To get out of or-der.

ಅವನ ಗೈರ ಹಾಜರಿ ಬಗ್ಗೆ ನಾನು ಮರಗುತ್ತೇನೆ, ಹಳಹಳಿಸುತ್ತೇನೆ — I miss him much.

ದಾರಿ ತಪ್ಪು — to lose one's way, to miss ones way.

ಅವನಿಗೂ ನನಗೂ ತಪ್ಪುಗಂಟಾಯಿತು — We missed each other.

ಕಳಕೊಂಡಿರು, ಹತ್ತರ ಇಲ್ಲೆಂದು ಅನಿಸು, ಕಾರಣವಾಗು — To miss (a thing).

ಲುಕಸಾನ ಮಾಡಿಕೊಂಡು ಮಾರು — to sell at loss.

ಒಳ್ಳೇ ನಸುಕಿನಲ್ಲಿ, ಬಲು ಬೆಳಿಗ್ಗೆ — ve'ry ear'ly, in the morn'ing.

ದುಷ್ಕರ್ಮ — a wick'ed action, an evil deed.

ಪರಿವಾರದವರು — fol'low-ers, ret'i-nue.

ಅತಿಶಯವಾಗಿ ex-treme'ly.

ಬೆನ್ನ ಮೇಲಿನ ತಮ್ಮ next brother.

### ಭಾಷಾಂತರಪಾಠ ೨೮

೧೮೩ We *shall* soon *have finished* our grammar. When you *have finished* your exercise you may go and play. The clerk[1] does not write a good hand, but he is a good man of business. Come to me every

1) ಇದರ ಉಚ್ಚಾರವು "ಕ್ಲಾರ್ಕ" ಆಗುತ್ತದೆ.

other day, and I will teach you English. What are your orders[1]? The farmer has much corn in his fields, but few potatoes. This book is as expensive as your map. That book is not so expensive as your map. This book is more expensive than your map. Guavas are not so wholesome as plantains. Figs are as wholesome as plantains or pomegranates, I like this dress. Which do you like best, coffee or tea? He is the best reader in the school. I am always happier in the country than in the town. My next care was to find the nearest way to the railway station. It is very late, it will get dark before we reach home. The silk of France are cheaper and better than those of England. He who is not industrious and economical will never become rich. He who does not sow will not reap. What good are fine clothes with an empty head? I esteem him, who does not despair in misfortune. Tell that boy there that I want him[2]. He pretends to know everything, although he is as a child. My watch is quite out of order. I do not know what is the matter with it. Sometimes it goes[3] quite well, and then it stops again. How the children have grown since I saw them last! The child fell downstairs. I have never seen him since[4]. Before this time to-morrow I shall have gained a peerage or a dungeon. I *shall have been called* to the bar by the time he arrives. When I *shall have brought* them into the land, which I promised unto them, and they *shall have eaten* and *filled* themselves[5] and *grown* fat, then will they turn to other gods[6].

ಈಗ ನಾನು ಖಾಲಿ ಇದ್ದೇನೆ. ದೀಪಗಳನ್ನು ಒಂದು ಬಿಟ್ಟು ಒಂದು ಹಚ್ಚು. ಆ ಶಾಲೆಯ ವ್ಯವಸ್ಥೆಯು ಚೆನ್ನಾಗಿ ಇಲ್ಲ. ನನ್ನ ಗಡಿಯಾರವು ಕೆಟ್ಟಿದೆ. ನನ್ನ ತಮ್ಮನು ಹೋದ ವರ್ಷ ತೀರಿಕೊಂಡನು. ಅವನ ಬಗ್ಗೆ ನಾನು ಬಹಳ ಮರಗುತ್ತೇನೆ. ಅವನು ಒಂದು ದಾರಿಯಿಂದ ಬಂದನು, ನಾನು ಒಂದು ದಾರಿಯಿಂದ ಹೋದೆನು. ಆದುದರಿಂದ[7] ಅವನಿಗೂ ನನಗೂ ತಪ್ಪುಗಂಟಾಯಿತು. ನಾನು

1) ತಮ್ಮದೇನು ಅಪ್ಪಣೆ? 2) ಅಗೋ ಆ ಹುಡುಗನಿಗೆ ನಾನು ಕರೆಯುತ್ತೇನೆಂದು ಹೇಳು. 3) ನಡೆಯುತ್ತದೆ. 4) ಅಂದಿನಿಂದ. 5) ಕುತ್ತಿಗೆಯ ವರೆಗೆ ತಿಂದುಂಡ ಬಳಿಕ, ಯಥೇಚ್ಛವಾಗಿ ತಿಂದು ಉಂಡು. 6) ಬೇರೆ ದೇವತೆಗಳನ್ನು ಪೂಜಿಸುತ್ತಿರುವರು. 7) So.

ಹಾದಿ ತಪ್ಪಿದ್ದರಿಂದ[1] ನನಗೆ ಈ ಗುಡಿಯು ಗೊತ್ತಾಯಿತು. ನಾನು ಮನೆಗೆ ಮುಟ್ಟುವವರೆಗೆ ನನ್ನ ಚೀಲವು ಹತ್ತರ ಇಲ್ಲೆಂಬದು ನನಗೆ ತಿಳಿಯಲಿಲ್ಲ[2]. ಅವನಿಗೆ ಏನೇನೂ ಅಪಾಯವಿಲ್ಲ. ಸುಮ್ಮನೆ ಕುಳಿತುಕೊಳ್ಳಿರಿ, ಇಲ್ಲದಿದ್ದರೆ ಹೊರಟು ಹೋಗಿರಿ. ನಮ್ಮ ಮನೆಗೆ ಎರಡೇ ಸೋಪಾನಗಳಿವೆ. ಅವನು ಅತಿ ಸಿಟ್ಟಿಗೆದ್ದನು. ಕಟ್ಟಕಡೆಗೆ ಅವನು ಆ ಕಾಳು ಲುಕಸಾನು ಮಾಡಿಕೊಂಡು ಮಾರಬೇಕಾಯಿತು. ನಾನು ಮುಂಬಯಿಗೆ ಹೋಗಬೇಕಾಗಿದೆ. ನಾನು ಕುಂಟನಿರುವದರಿಂದ ನಡೆಯಲಾರೆನು. ಅವನ ಎದುರಿಗೆ ಇಂಥ ಮಾತುಗಳನ್ನು ನಾನು ಆಡಲಾರೆನು. ಈ ಕೆಲಸವು ನನ್ನಿಂದಾಗದು. ಇಂಥ ದುಷ್ಕರ್ಮವನ್ನು ನಾನು ಮಾಡಲಾರೆನು. ನಮ್ಮ ಗೌಳಿಗನು ಮುಂಜಾನೆ ಸಂಜೆಗೆ ಎರಡೂ ಹೊತ್ತು ತಾಜಾ ಹಾಲು ತರುತ್ತಾನೆ[3]. ನಾನು ಬಲು ಬೆಳಿಗ್ಗೆ ಏಳುತ್ತೇನೆ. ಈ ಔಷಧವನ್ನು ಮುಂಜಾನೆ ಸಂಜೆಗೆ ತಕ್ಕೊಳ್ಳುತ್ತ ಹೋದರೆ, ತೀವ್ರ ನೆಟ್ಟಗಾಗುವಿ[4]. ನಾಳಿನ ಸೋಮವಾರ ದಿವಸ ನಾನು ನಿಮ್ಮ ಕಡೆಗೆ ಬರುವೆನು. ಹುಡುಗರು ಶಾಲೆಗೆ ಹೋಗಿದ್ದಾರೋ, ಇನ್ನೂ ಮನೆಯಲ್ಲಿದ್ದಾರೋ? ನಾನು ನಿನ್ನ ಕಡೆಗೆ ಬಂದಾಗ ನೀನು ಪತ್ರಗಳನ್ನು ಬರೆದಿಡುವಿಯು? ನೀನು ಪುಣೆಯಿಂದ ತಿರುಗಿ ಬಂದ ಬಳಿಕ ನಾನು ನಿನಗೆ ಹೇಳತಕ್ಕದ್ದನ್ನು ಹೇಳುವೆನು. ಐದು ಬಡಿದ ಮೇಲೆ ನಾನು ಹೊರಗೆ ಹೋಗಿ ಬರುವೆನು; ಆದರಿಂದ ನೀನು ಐದು ಬಡಿಯಲಿಕ್ಕೆ ಸ್ವಲ್ಪ ಮುಂಚೆ ಬರಬೇಕಾಗುವದು. ಕಾಲು ಕಡಿಮೆ ಐದು ಗಂಟೆಗೆ ಬಂದರೆ, ನಾನು ಆಗ ಬಹುತರವಾಗಿ[5] ಪತ್ರ ಬರೆಯುತ್ತಿರುವೆನು. ಆ ಮೇಲೆ ಹತ್ತು ನಿಮಿಷಗಳ ನಂತರ ನಾನು ಅದನ್ನು ಮುಗಿಸಿ ಪೋಷಾಕು ಹಾಕಿಕೊಳ್ಳುತ್ತಿರುವೆನು. ಐದು ಬಡಿಯಲಿಕ್ಕೆ ಐದು ನಿಮಿಷ ಇರುವಾಗ ನಾನು ಪೋಷಾಕು ಹಾಕಿಕೊಂಡು ತಿರುಗಾಡಲಿಕ್ಕೆ ಹೊರಟಿರುವೆನು. ನಾನು ಹೊರಟು ನಿಂತಿರುವಷ್ಟರೊಳಗೆ ಅವನು ಬಂದನು[6]. ನಾನು ಮಾತಾಡುವವನಿದ್ದೆನು, ಆದರೆ ಅವನು ನಡುವೆ ಅಡ್ಡ ಬಂದನು[7]. ಅವನ ಸಂಗಡ ಸುಮಾರು ಮೂವತ್ತು ಮಂದಿ ಪರಿವಾರದವರಿದ್ದರು. ನೀವು ಇಲ್ಲದಾಗ ಅವನು ಬಂದನು. ನಿಮ್ಮನ್ನು ಪುನಃ ನೋಡಿ ನನಗೆ ಸಂತೋಷವಾಗುತ್ತದೆ. ಕಂಡಕಂಡವರು[8] ನನಗೆ ಹೀಗೇ ಹೇಳುತ್ತಾರೆ. ಸರಿಯಾಗಿ[9] ಹನ್ನೆರಡು ಬಡೆದಿತ್ತು. ಎಲ್ಲರಿಗೂ ತಮ್ಮ ತಮ್ಮ ನಡತೆ ನೆಟ್ಟಗೆ ಕಾಣುತ್ತದೆ. ಈಗ ಅವನು ಕೆಲಸದೊಳಗಿದ್ದಾನೆ. ಅವನಿಗೆ ಅವಕಾಶ ಸಿಕ್ಕಾಗ ಅವನು ನಿಮ್ಮೊಡನೆ ಮಾತಾಡುವನು. ಅವನು ನನ್ನ ಬೆನ್ನ ಮೇಲಿನ ತಮ್ಮನು.

1) And therefore. 2) I did not miss my purse till *etc.* 3) brings us fresh milk. 4) You will soon be well, you will soon recover, you will soon feel better. 5) Most probably. 6) As I was about to go out, he came. 7) I was about to speak, but he prevented me. 8) Everybody. 9) Exactly.

## ೨೧ ನೇ ಪಾಠ.

## The Infinitive Mood ( ಮುಂದೆ ಸಾಗಿದ್ದು ).

೧೮೪ ಇಂಗ್ಲೀಷಿನಲ್ಲಿ ಹಲವು ಕ್ರಿಯಾಪದಗಳ ಮುಂದೆ ಕರ್ಮಸ್ಥಾನದಲ್ಲಿರತಕ್ಕ ಅಧೀನ ವಾಕ್ಯದೊಳಗಿನ ಕರ್ತೃಪದವನ್ನು ದ್ವಿತೀಯೆಯಲ್ಲಿಟ್ಟು ಕ್ರಿಯಾಪದಕ್ಕೆ ಬದಲಾಗಿ ಕ್ರಿಯಾವಾಚಕವನ್ನು ಹಾಕುತ್ತಾರೆ. ಉದಾ—

I wish *that he should go*<br>I wish *him to go* } ಅವನು ಹೋಗಬೇಕೆಂದು ನನ್ನ ಮನಸ್ಸುಂಟು.

I thought *that he was a clever boy*<br>I thought *him to be a clever boy* } ಆ ಹುಡುಗನು ಬುದ್ಧಿವಂತನೆಂದು ನಾನು ತಿಳಿದಿದ್ದೆನು.

I found *that he was a dunce,*<br>I found *him to be a dunce* } ಅವನು ಹಸಿ ದಡ್ಡನಿದ್ದಂತೆ ನನಗೆ ಕಂಡು ಬಂದಿತು.

ಈ ಪ್ರಕಾರದ ಕ್ರಿಯಾಪದಗಳು—to wish, to desire, to want, to beg, to see, to hear, to make, to discover, to find, to know, to remember, to suspect, to imagine, to believe, to prove, to deny, to hold, to take, to think ಮುಂತಾದವುಗಳು.

೧೮೫ See, feel, hear, make, let, bid ಇವುಗಳ ಮುಂದಿನ ಕ್ರಿಯಾವಾಚಕದ to ಲೋಪವಾಗುತ್ತದೆ; ಮತ್ತು ಆ ಕ್ರಿಯಾವಾಚಕವನ್ನು ಬೇರೆ ರೀತಿಯಿಂದ ಭಾಷಾಂತರ ಮಾಡಬೇಕಾಗುತ್ತದೆ. ಉದಾ—

I saw him *do* it ಅವನು ಅದನ್ನು ಮಾಡುವದನ್ನು ನಾನು ಕಂಡೆನು.<br>
I heard him *say* so ಅವನು ಹೀಗೆ ಅನ್ನುವದನ್ನು ನಾನು ಕೇಳಿದೆನು.

ಇದೇ ಮೇರೆಗೆ to need ಅವಶ್ಯವಿರು, to dare ಧೈರ್ಯಪಡು ಎಂಬ ಕ್ರಿಯಾಪದಗಳ ಮುಂದಿನ ಕ್ರಿಯಾವಾಚಕದ to ಆದರೂ ಲೋಪವಾಗುತ್ತದೆ. ಈ ಕ್ರಿಯಾಪದಗಳಿಗೆ ತೃತೀಯ ಪುರುಷದಲ್ಲಿ s ಪ್ರತ್ಯಯವು ಹತ್ತುವದಿಲ್ಲ. Dare ಎಂಬದರ ಮುಂದೆ not ಎಂಬ ಅವ್ಯಯವು ಇರದಿದ್ದರೆ, ಒಮ್ಮೊಮ್ಮೆ to ಲೋಪವಾಗುವದಿಲ್ಲ. ಮತ್ತು s ಪ್ರತ್ಯಯವು ಹತ್ತುತ್ತದೆ.

You need not *say* so ನೀನು ಹೀಗೆ ಅನ್ನುವದು ಅವಶ್ಯವಿಲ್ಲ.<br>
I dare not *go* in the dark ಕತ್ತಲೆಯೊಳಗೆ ಹೋಗಲಿಕ್ಕೆ ನನಗೆ ಧೈರ್ಯವಿಲ್ಲ.<br>
ಆದರೆ, He dares *to swim* in the Indus ಅವನು ಸಿಂಧೂ ನದಿಯಲ್ಲಿ ಈಸುವದಕ್ಕೆ ಧೈರ್ಯಗೊಳ್ಳುತ್ತಾನೆ.

ಇದಲ್ಲದೆ had better, had rather ಎಂಬ ವಾಕ್ಯಾಂಶಗಳಲ್ಲಿ ಸಹ had ದ ಮುಂದಿನ to ಲೋಪವಾಗುತ್ತದೆ. ಉದಾ—

I *had rather* go and do my lessons ನಾನು ಹೋಗಿ ನನ್ನ ಪಾಠಗಳನ್ನು ಮಾಡುವದು ಲೇಸು. ಆದರೆ,

You *had better* not to remain here ನೀನು ಇಲ್ಲಿ ನಿಲ್ಲದೆ ಇರುವದು ಒಳ್ಳೇದು

ಇಂಥಲ್ಲಿ had ಎಂಬದು have ದ ಭೂತಕಾಲದ ರೂಪವೆಂದು ತಿಳಿಯ ಕೂಡದು; ಇದು ಸಂಶಯಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದ್ದು, ಇದರ ಅರ್ಥವು would have ಎಂತ ಆಗುತ್ತದೆ.

೧೮೬ ಒಮ್ಮೊಮ್ಮೆ ಪ್ರಶ್ನಾರ್ಥಕ ಸರ್ವನಾಮಗಳ ಮುಂದೆಯೂ ಪ್ರಶ್ನಾರ್ಥಕ ಕ್ರಿಯಾವಿಶೇಷಣಗಳ ಮುಂದೆಯೂ ಕ್ರಿಯಾವಾಚಕವು ಬರುವದುಂಟು. ಆಗ ಅದು ಒಂದು ಉಪವಾಕ್ಯಕ್ಕೆ ಬದಲಾಗಿ ಇರುತ್ತದೆ ಆದರೆ ಆ ಉಪವಾಕ್ಯದ ಕರ್ತೃವು ಬೇರೆ ಪುರುಷದಲ್ಲಿರಲು, ಕ್ರಿಯಾವಾಚಕವನ್ನು ಪ್ರಯೋಗಿಸಲಾಗದು. ಉದಾ—

I know not *what to do – what I should do* ಏನು ಮಾಡಬೇಕೆಂದು ನನಗೆ ತಿಳಿಯದು.

I know not what you are to do ನೀನು ಏನು ಮಾಡಬೇಕು ಎಂಬದನ್ನು ನಾನು ಅರಿಯೆನು,

I am at a loss *how to act = how should act* ಹೇಗೆ ಮಾಡಬೇಕೆಂಬದು ನನಗೆ ತಿಳಿಯದು.

I told him *how to do it = how he should do it* ಅದನ್ನು ಹೇಗೆ ಮಾಡಬೇಕೆಂಬದನ್ನು ನಾನು ಅವನಿಗೆ ಹೇಳಿದೆನು.

I told him how I intended to do it ನನ್ನ ಉದ್ದೇಶವು ಅದನ್ನು ಅವನು ಹೇಗೆ ಮಾಡತಕ್ಕದ್ದಿತ್ತೆಂಬದನ್ನು ನಾನು ಅವನಿಗೆ ತಿಳಿಸಿದೆನು.

೧೮೭ ಒಮ್ಮೊಮ್ಮೆ ಕ್ರಿಯಾವಾಚಕವು ಚತುರ್ಥೀ ವಿಭಕ್ತಿಯಲ್ಲಿರಲಾಗಿ ಅದರ ಭಾಷಾಂತರವನ್ನು ಭೂತನ್ಯೂನದಿಂದ ಮಾಡಬೇಕಾಗುತ್ತದೆ. ಉದಾ—

We were surprised to see him there ಅವನನ್ನು ಅಲ್ಲಿ ಕಂಡು ನಮಗೆ ಆಶ್ಚರ್ಯವಾಯಿತು.

I am delighted *to see* you here ನಿಮ್ಮನ್ನು ಇಲ್ಲಿ ಕಂಡು ನನಗೆ ಬಹಳ ಸಂತೋಷವಾಗುತ್ತದೆ.

೧೮೮ Certain, sure ಮುಂತಾದ ಹಲವು ವಿಶೇಷಣಗಳ ಮುಂದಿನ ಚತುರ್ಥ್ಯಂತ ಕ್ರಿಯಾವಾಚಕವನ್ನು ಕ್ರಿಯಾಪದ ಮಾಡಿ, ವಿಶೇಷಣವನ್ನು ಕ್ರಿಯಾ ವಿಶೇಷಣ ಮಾಡಬೇಕಾಗುತ್ತದೆ. ಉದಾ—

He is sure to go
He will surely go } ಅವನು ಹೋಗುವದು ನಿಶ್ಚಯವು,
He is certain to go
He will certainly go } ಅವನು ಖಂಡಿತವಾಗಿ ಹೋಗುವನು,

ಕೆಲವು ಇಂಗ್ಲಿಷ ಶಬ್ದಗಳ ಭಾಷಾಂತರ ಮಾಡುವಾಗ ವಿಶೇಷಣಕ್ಕೆ ಬದಲಾಗಿ ಕನ್ನಡದಲ್ಲಿ ನಾಮಪದವನ್ನು ಹಾಕಬೇಕಾಗುತ್ತದೆ. ಉದಾ—

He was glad *to hear* this news ಈ ವರ್ತಮಾನವನ್ನು ಕೇಳಿ ಅವನಿಗೆ ಸಂತೋಷವಾಯಿತು.

I was astonished at the figure ಆ ಆಕೃತಿಯನ್ನು ನೋಡಿ ನಾನು ಆಶ್ಚರ್ಯಪಟ್ಟೆನು.

೧೮೯ To be sure ನಿಶ್ಚಯವಾಗಿ, ನಿಜವಾಗಿ; To tell the truth ನಿಜವಾಗಿ ಹೇಳಬೇಕಾದರೆ, To be candid ಮನಸ್ಸು ಬಿಚ್ಚಿ ಹೇಳಬೇಕಾದರೆ, ನಿಷ್ಕಪಟದಿಂದ; To be brief ಸ್ವಲ್ಪದರಲ್ಲಿ ಹೇಳಬೇಕಾದರೆ, ಸಾರಾಂಶವೇನಂದರೆ; To confess the truth ಸತ್ಯಮಾತು ಹೇಳಬೇಕಾದರೆ; To turn to another matter ಇನ್ನು ಎರಡನೇ ಮಾತಿನ ವಿಷಯಕ್ಕೆ ಮಾತಾಡುವದೆಂದರೆ—

ಈ ಮುಂತಾದ ವಾಕ್ಯಾಂಶಗಳು ಬಹುತರವಾಗಿ ವಾಕ್ಯದ ಆರಂಭದಲ್ಲಿ ಬರುತ್ತವೆ; ಮತ್ತು ವಾಕ್ಯದೊಳಗಿನ ಯಾವ ಶಬ್ದಕ್ಕೂ ಇವುಗಳ ಶಬ್ದಕ್ಕೂ ಸಂಬಂಧವಿರುವದಿಲ್ಲ. ಹೇಗಂದರೆ—

*To be candid with you,* I dislike your company ಮನಸ್ಸು ಬಿಚ್ಚಿ ಹೇಳಬೇಕಾದರೆ, ನಿನ್ನ ಸಂಗತಿ ನನಗೆ ಬೇಡ.

೧೯೦ It is said that he had done so
ಅಥವಾ, They say that he had done so
ಅಥವಾ, He is said to have done so } ಅವನು ಹೀಗೆ ಮಾಡಿದ್ದಾನಂತೆ.

೧೯೧ He seems (or appears) to be a clever boy,
ಅಥವಾ, It seems that he is a clever b[oy]
ಅವನು ಜಾಣ ಹುಡುಗನೆಂದು ಕಾಣುತ್ತಾನೆ.
ಅಥವಾ, ಆ ಹುಡುಗನು ಜಾಣನಿದ್ದಂತೆ ತೋರುತ್ತದೆ.

೧೯೨ ಶಬ್ದಸಂಗ್ರಹ ೨೯.

| | | | |
|---|---|---|---|
| To ad-mit' (a thing) | ಒಪ್ಪಿಕೊಳ್ಳು. | A walking stick | ಕೋಲು, ಬಡಿಗೆ. |
| To de-clare', to af-firm | ಖಂಡಿತವಾಗಿ ಹೇಳು, ಸ್ಪಷ್ಟವಾಗಿ ಹೇಳು. | A cul'prit | ಅಪರಾಧಿ, ಗುನ್ಹೆಗಾರ. |
| To ar-range' | ನಿರ್ಧರಿಸು. | A man'tle | ಗೊಂಗಡಿ, ಧೋತರ ಮುಂತಾದ ಅಂಗವಸ್ತ್ರ, ನಿಲುವಂಗಿ. |

| | | | |
|---|---|---|---|
| To im-ag'ine / to sup-pose | ಭಾವಿಸು, ಊಹಿಸು. ಯೋಚಿಸು, ಕಲ್ಪಿಸು. | To dis-regard' | ಅಲಕ್ಷ ಮಾಡು. |
| | | A gambler | ಜೂಜುಗಾರ. |
| Plain'ly | ಸ್ಪಷ್ಟವಾಗಿ. | To over-load | ಮಿತಿಮೀರಿ ಹೇರು, ಅಳತೆಗೆಟ್ಟು ಹೇರು. |
| Gently | ಮೆಲ್ಲಗೆ. | | |
| Mi'ser | ಜೀನ, ಜಿಪುಣ, ಕೃಪಣ. | To break for'th | ಒಮ್ಮಿಂದೊಮ್ಮೆ ಹೊರಬೀಳು. |

At such an ear'ly hour ಇಷ್ಟು ಬೇಗ.
To trans-act' business ಕೊಡಕೊಂಬೋಣ ಮಾಡು, ಕೆಲಸ ನಡಿಸು.
A house of business ಅಂಗಡಿ.

## ಭಾಷಾಂತರಪಾಠ ೨೯.

೧೯೩ I think *this lady to be* exceedingly pruednt. You cannot expect *me to get up* at such an early hour. His parents wanted *him to study* medicine, but his other relations wished *him to study* law. I remember *him to have* been the cleverest boy at school. All believe *him to be* a gambler. Do you believe *this gentleman to be* honest? Yes sir, I believe *him to be* perfectly honest. I have transacted much business with him and have never found *him to be* otherwise[1]. My parents desired *me to write* to them every fortnignt, but they cannot expect *me to write* so often. My uncle wishes *me to spend* the holidays with him in the country, but my parents want *me to go* home. I admit *him to be* perfectly honest and upright, but at the same time I must declare *him to be* rather miserly. I remember *this gentleman to have sold* walking-sticks in the street and now he has the large house of business in the whole town. I thought *him to be* exceedingly handsome, but he need not have been proud of his beauty. I do not yet know *what to think* of our new physician; some suppose *him to be* very clever in his profession, others affirm *him to be* very ignorant. We suspected our *servant to have taken* some of our rice, but afterwards the *rats were found to be* the culprits. I believe *him to be happy.* but he does not seem *to be so.* You will spoil your eyes, if you always read in the dark. It is very good of you to assist us. I am glad to have met you. Whether

1) ಅವನು ಅಪ್ರಾಮಾಣಿಕನಿದ್ದಂತೆ ನನಗೆ ಎಂದೂ ಕಂಡು ಬಂದಿಲ್ಲ.

you are a friend or a foe, I shall disregard your words. I have brought this *for you to look* at. *To confess the truth,* I was grossly mistaken. But *to turn to another matter,* do you know for certain whether Rama is really going to England or not? He is said to be one of the best painters in the country. *To speak plainly,* I consider *him to be* a very wicked man. It is very kind of you to give me this timely assistance. You need not say a word about it. I felt[1] *him touch* me gently on the arm. It was cruel of him to overload his pony. I saw *him take* aim with his bow. They bade *me tell* them the right road. He made *me come* and *sit* beside him. I *let* him go back to his own house.

ನಿನ್ನ ಪರೀಕ್ಷೆ ಇಳಿಯಿತೆಂಬುದನ್ನು ನಿನಗೆ ತಿಳಿಸುವದಕ್ಕೆ ನನಗೆ ಬಹಳ ಸಂತೋಷವಾಗುತ್ತದೆ. ಅವನು ಕೈಕೊಂಡ ಕೆಲಸವು ನಿಶ್ಚಯವಾಗಿ ಕೈಗೂಡಿ ಬರುವದು. ನೀನು ಹೇಳುವದೆಲ್ಲ ನಿಜವು ಎಂಬ ಬಗ್ಗೆ ರಾಮನು ನಿಶ್ಚಯವಾಗಿ ನನಗೆ ಮನಗಾಣಿಸಿ ಕೊಡುವನು. ಅವನು ನನ್ನ ಅಪ್ಪಣೆಗಳನ್ನು ಮೀರಿದನೆಂಬುವದು ನಿಶ್ಚಯವು. ಇಂಥ ಪ್ರಸಂಗದಲ್ಲಿ ಯಾರ ಸಹಾಯ ಬೇಡಬೇಕೆಂಬುವದು ನನಗೆ ತಿಳಿಯದು. ಹೇಗೆ ನಡೆಯಬೇಕೆಂಬ ಬಗ್ಗೆ ಅವನಿಗೆ ದೊಡ್ಡ ಸಂಕಟ ಬಂದದೆ. ಏನು ಮಾಡಬೇಕೆಂಬುವದು ನನಗೆ ತಿಳಿಯದು. ಏನು ಮಾತಾಡಬೇಕೆಂಬದನ್ನು ನಾನು ಅವನಿಗೆ ಹೇಳಿದೆನು. ನೀನು ಏನು ಮಾಡಬೇಕೆಂಬದನ್ನು ನಾನು ಅರಿಯೆನು. ನೀವೆಲ್ಲರು ಒಟ್ಟಾಗಿರುವದನ್ನು ಕಂಡು ನನಗೆ ಬಹಳ ಸಂತೋಷವಾಯಿತು. ಅವನು ಹೋಗುವದನ್ನು ನೋಡಿ ನಾನು ಬಹಳ ಸೋಜಿಗಪಟ್ಟೆನು. ಆ ಸುದ್ದಿಯನ್ನು ಕೇಳಿ ನಮಗೆ ಬಹಳ ಆಶ್ಚರ್ಯವಾಯಿತು. ನೀನು ಹೀಗೆ ಅನ್ನುವದು ಅವಶ್ಯವಿಲ್ಲ. ಹೀಗೆ ಮಾಡುವದಕ್ಕೆ ಅವನಿಗೆ ಎದೆಯಿಲ್ಲ. ಹೀಗೆ ಅನ್ನಲಿಕ್ಕೆ ಯಾರಿಗೆ ಧೈರ್ಯವಾದೀತು? ಆತನ ತಮ್ಮನು ಮಾಡಿದ್ದು ಆತನಿಗೆ ತಿಳಿಸಲಿಕ್ಕೆ ನನಗೆ ಧೈರ್ಯ ಸಾಲದು. ಅವನು ಹೋಗುವದನ್ನು ನಾನು ನೋಡಿದೆನು. ಅವನು ಹೀಗೆ ಅನ್ನುವದನ್ನು ನಾನು ಕೇಳಿದೆನು. ನೀವು ಅಳುವದನ್ನು ನೋಡಿ ನನಗೆ ಬಹಳ ಕೆಡಕು ಅನಿಸುತ್ತದೆ. ಅವನಿಗೆ ಸಹಾಯ ಮಾಡುವದಕ್ಕೆ ನಾವು ಸಿದ್ಧರಾಗಿದ್ದೇವೆ. ಬಹಳ ವ್ಯಾಯಾಮ ಮಾಡುವದು ನಿಮಗೆ ಹಿತಕರವಾದದ್ದು. ನೀವು ನನಗೆ ಹಣ ಕಳಿಸಿದ್ದು ಬಹಳ ಒಳ್ಳೇದಾಯಿತು. ತಾತ್ಪರ್ಯವೇನಂದರೆ, ನಿನ್ನ ಬಿನ್ನಹವನ್ನು ನಾನು ಮಾನ್ಯ ಮಾಡಲಾರೆನು. ನಿಜವಾಗಿ ಹೇಳಬೇಕಾದರೆ, ನಾನು ಮಾಡಿದ್ದು ಸೈ[2]. ಅವನು ಬುದ್ಧಿವಂತನು ಕಾಣುತ್ತಾನೆ. ಅವನ ಹೇತು ಕೈಗೂಡಿ

1) ತಿಳಿಯಿತು. 2) I did So.

ಳುರುವಂತೆ ತೋರುತ್ತದೆ. ಅದರ ವಿಷಯಕ್ಕೆ ಅವನಿಗೆ ಏನೇನೂ ಗೊತ್ತಿಲ್ಲದ ಹಾಗೆ ಕಾಣುತ್ತದೆ. ಈ ಮಾತು ಅವನಿಗೆ ಗೊತ್ತಿದ್ದಂತೆ ಕಾಣುತ್ತದೆ. ಅವನು ಗುರುತಿನವನಲ್ಲದ ಹಾಗೆ ಕಾಣುತ್ತಾನೆ. ಅವನು ಉತ್ಕೃಷ್ಟ ಹಾಡುವವನಂತೆ. ಬರಗಾಲದಲ್ಲಿ ಅವನು ಬಡಬಗ್ಗರನ್ನ ಕಾಪಾಡಿದನಂತೆ. ನಮಗೆ ಗೊತ್ತಿದ್ದದ್ದಕಿಂತ ಅವನಿಗೆ ಬಹಳ ಗೊತ್ತಿದೆಯಂತೆ. ಗೋವಿಂದನು ಇಂಗ್ಲಿಷ ಕಲಿಯುತಕ್ಕವನಿದ್ದನು. ಅಭ್ಯಾಸ ಹೇಗೆ ಮಾಡಬೇಕೆಂಬುವದು ನಿಮಗೆ ಗೊತ್ತಿರಬೇಕು. ನನ್ನನ್ನು ನೋಡಿ ನಿನಗೆ ಇಷ್ಟು ಯಾಕೆ ಆಶ್ಚರ್ಯವಾಯಿತು? ನಾನು ಸಾಲೆಗೆ ಹೋಗಬೇಕೆಂದು ನನ್ನ ತಂದೆಯು ಮನಸಿನೊಳಗಿತ್ತು. ಅವನು ತನ್ನ ಪುಸ್ತಕಗಳನ್ನು ಎಲ್ಲಿ ಇಡತಕ್ಕದ್ದೆಂಬದನ್ನು ನೀನು ಅವನಿಗೆ ಹೇಳಿದ್ದೀಯಾ? ಇಂಥ ಪ್ರಸಂಗದಲ್ಲಿ ಹೇಗೆ ವರ್ತಿಸಬೇಕೆಂಬುವದು ಅವನಿಗೆ ಈಗ ತಿಳಿಯಿತು. ರಾಮನಿಗೆ ನಿಶ್ಚಯವಾಗಿ ಇನಾಮು ಸಿಗುವದು. ಅವನು ಈಗ ಕನಿಷ್ಠ ಐದು ದಿನ ಸಾಲೆಗೆ ಬಂದಿಲ್ಲೆಂಬದು ನನಗೆ ನಿಶ್ಚಯವಾಗಿ ಗೊತ್ತದೆ.

---

## ೨೨ ನೇ ಪಾಠ.

## ಪ್ರಯೋಜಕ ಕ್ರಿಯಾಪದಗಳು Casual Verbs.

೧೯೪ ಇಂಗ್ಲೀಷಿನೊಳಗೆ ಪ್ರಯೋಜಕ ಕ್ರಿಯಾಪದಗಳ ಅರ್ಥವನ್ನು ತೋರಿಸುವ ರೀತಿಗಳು ಅನೇಕ ಉಂಟು.

೧ ಹಲವು ಶಬ್ದಗಳೊಳಗಿನ ಸ್ವರಗಳಲ್ಲಿ ಹೆಚ್ಚುಕಡಿಮೆಯಾಗಿ ಪ್ರಯೋಜಕ ರೂಪಗಳಾಗುತ್ತದೆ. ಇದರೆ ಇಂಥ ಕ್ರಿಯಾಪದಗಳು ತೀರ ಸ್ವಲ್ಪ ಉಂಟು.

| | | | |
|---|---|---|---|
| To see | ನೋಡು; | to show | ತೋರಿಸು, |
| To fall | ಬೀಳು; | to fell | ಕಡಿ, (ನೆಲಕ್ಕೆ) ಕೆಡವು. |
| To rise | ಏಳು; | to raise | ಎತ್ತು. |
| To sit | ಕೂಡ್ರು; | to set, to seat | ಕೂಡ್ರಿಸು. |
| To lie | ಬೀಳು; | to lay | ಇಡು, ಇರು. |

೨ ಹಲವು ಕ್ರಿಯಾಪದಗಳು ಅಕರ್ಮಕವಿದ್ದಾಗ ಒಂದು ಅರ್ಥ ಕೊಡುತ್ತವೆ. ಮತ್ತು ಸಕರ್ಮಕವಿದ್ದಾಗ ಅವು ಅದೇ ಅರ್ಥದ ಪ್ರಯೋಜಕ ರೂಪಗಳೆಂದು ತಿಳಿದುಕೊಳ್ಳಬೇಕು, ಹೇಗಂದರೆ—

To stop ಅ. ಲ್ಲು; ಸ. ನಿಲ್ಲಿಸು. to fill ಅ. ತುಂಬು; ಸ. ತುಂಬಿಸು.
To grow ಅ. ಬೆಳೆ; ಸ. ಬೆಳೆಸು. to break ಅ. ಮುರಿ; ಸ. ಮುರಿ.

೩ ಒಮ್ಮೊಮ್ಮೆ ಪ್ರಯೋಜಕದ ಅರ್ಥವಿರಲಾಗಿ ಬೇರೆ ಕ್ರಿಯಾಪದಗಳನ್ನು ಪ್ರಯೋಗಿಸಬೇಕಾಗುತ್ತದೆ. ಹೇಗಂದರೆ—

| | | | |
|---|---|---|---|
| To die | ಸಾಯು; | to kill | ಕೊಲ್ಲು, |
| To go | ಹೋಗು; | te send | ಕಳುಹು. |
| To learn | ಕಲಿ; | to teach | ಕಲಿಸು. |

೪ ಆದರೆ ಸಾಧಾರಣವಾಗಿ ಪ್ರಯೋಜಕಾರ್ಥವನ್ನು ತೋರಿಸುವದಾದರೆ, to cause, to make, to get, to have ಮುಂತಾದ ಕ್ರಿಯಾಪದಗಳನ್ನು ಉಪಯೋಗಿಸಬೇಕಾಗುತ್ತದೆ. ಹೇಗಂದರೆ—

I *got* him *to write* the letter }
I *made* him *write* the letter } ನಾನು ಅವನಿಂದ ಪತ್ರ ಬರಿಸಿದೆನು.

I must *get* my books *bound* — ನಾನು ನನ್ನ ಪುಸ್ತಕಗಳನ್ನು ಬಾಯಿಂಡ ಮಾಡಿಸಬೇಕು.

I *am going to have* my likeness *taken* — ನಾನು ನನ್ನ ತಸಬೀರು ತೆಗೆಯಿಸಲಿಕ್ಕೆ ಹೋಗುತ್ತಲಿದ್ದೇನೆ.

I *gave* him to *understand etc.* ನಾನು ಅವನಿಗೆ ತಿಳಿಸಿದ್ದೇನಂದರೆ—

## ೧೯೫ ಶಬ್ದಸಂಗ್ರಹ ೩೦.

| | | | |
|---|---|---|---|
| Fe'ver-ish | ಜ್ವರರೋಗಿಷ್ಟ, ಜ್ವರವುಳ್ಳ, ಅಸ್ವಸ್ಥ. | Trow'sers | ಇಜಾರು. |
| Chol'era | ಮಾರಿಕಾ ಉಪದ್ರವ, ಪಟಕೀ ಬೇನೆ. | A po-lice'man | ಊರ ಬಂದೋಬಸ್ತಿಗಾಗಿ ಇಟ್ಟ ಸಿಪಾಯಿ. |
| Des'olate | ಹಾಳು. | To ar-rest' | (ಸರಕಾರದ ಹುಕುಮಿನಿಂದ) ಹಿಡಿ, ಕೈದುಮಾಡು. |
| To re-pair | ನೆಟ್ಟಗೆ ಮಾಡು, ದುರಸ್ತ ಮಾಡು, ಸರಿಪಡಿಸು. | To be-head' | ತಲೆಹೊಡಿ. |
| A pre-scrip'tion | ಔಷಧೋಪಚಾರದ ಪತ್ರ, ಚಿಕಿತ್ಸಾಪತ್ರ. | To ad-vance For'ward | ಮುಂಗಡ ಕೊಡು. ಸಾಗು, ಮುಂದರಿ. |
| A chem'ist | ಔಷಧವನ್ನು ತಯಾರಿಸಿ ಮಾರುವವ. | Bat'tle-ar-ray | ವ್ಯೂಹ, ಸೈನ್ಯರಚನೆ. |
| De-mol'ish | ಕೆಡವು, ನೆಲಸಮ ಮಾಡು. | Stubborn | ಮೊಂಡ, ಚಂಡಿ, ಹಟಮಾರಿ, ಛಲವುಳ್ಳ. |
| ಬೇಕಂತ ಬುದ್ಧಿಪೂರ್ವಕ | in-ten'tionally. | ಕುಪ್ಪಸ | a bo'dice. |
| ಸ್ಮಾಲಿ | small'pox. | ಲಂಚ | bribe. |

The par-tic'ulars (of any-thing) ವಿವರ, ತಪಶೀಲು.
To per-mit' to speak ಮಾತಾಡಗೊಡು.
To suf'fer to go ಹೋಗಗೊಡು.
To rage (when said of a dis-ease') ಅತಿ ಪ್ರಬಲವಾಗಿರು.
To make (one) stay ನಿಲ್ಲಿಸಿಕೊಳ್ಳು.
To get a pre-scrip'tion made up ಔಷಧಪಟ್ಟಿ ತಯಾರು ಮಾಡಿಸು.
To re-store' all dam'a-ges {ಕೇಡು ಆದದ್ದನ್ನೆಲ್ಲ ತುಂಬಿಕೊಡು, ಭರಣಾ ಮಾಡು.

( ಗಡಿಯಾಲ ) ನೆಟ್ಟಗೆ ನಡಿ (clock) to go on well.
ಸೆರೆ ಬೀಳು, ಬಂದೀಖಾನೆ— to be in a gaol.
ಸೆರೆಯಲ್ಲಿ ಇಡು, ತುರಂಗದಲ್ಲಿ ಹಾಕು to put in' to pris'on.
ನಂಬು, ವಿಶ್ವಾಸವಿಡು {to put trust (in), to place con'fi-dence (in).

### ಭಾಷಾಂತರಪಾಠ ೩೦.

೧೯೩. You must wait here till I return. I have been very diligent all day, so I hope you will let me go to the theatre to-might. What surprised me most was that the physician allowed him to drink wine while in that feverish state[1]. I intended to tell him all the particulars but he did not permit me to speak. His parents did not suffer him to go to Pandharpur, because cholera was raging there at the time. My parents *made* me stay at home; and a fortunate thing it was for me. *The* king *caused* the old desolate palace *to be repaired.* You must get a better groom than you have at present. Get this prescription carefully *made up at the* chemist's. The children *must have* their hair *cut* to-morrow. The general *had* all the house *demolished,* but as he had no orders to do so, the king *made* him *restore* all damages. I *have had* a new pair trowsers made. The policeman *had* the thief *arrested.* The policeman has just arrested a thief. I have made a new pair of trowsers. If you do not write your exercise carefully, I *shall make you* do again. They *caused* the king *to be*

1) ಅವನು ಈ ಪ್ರಕಾರ ಜ್ವರೋನ್ಮುಖನಾಗಿರುವಾಗ, ಅಥವಾ ಅವನ ಮೈಯಲ್ಲಿ ಜ್ವರಾಂಶವಿದ್ದಾಗ.

*arrested* and then *had* him *beheaded* The general *caused* the army *to advance* in battle-array. He *caused* an inquiry *to be made.* My master *made* me *do my* exercise once more, because it was full of mistakes. You *must get* your book *bound*. I *had* a new coat *made*. I *shall have* my watch *repaired*. I *shall have* repaired my watch before I ( shall ) want it.

ಮುದುಕನು ತನ್ನ ಮಗನನ್ನು ಎತ್ತಿನ ಮೇಲೆ ಕುಳ್ಳಿರಿಸಿದನು. ನನ್ನ ಕಾಲು ಕನ್ನಡಿಯ ಮೇಲೆ ಬಿದ್ದದರಿಂದ ಅದು ಒಡೆಯಿತು. ನಾನು ಅದನ್ನು ಬೇಕಂತ ಒಡೆಯಲಿಲ್ಲ. ನನ್ನ ಕಾಲು ಕನ್ನಡಿಯ ಮೇಲೆ ಬಿತ್ತೆಂದು ನಾನು ಅನ್ನುತ್ತೇನೆ; ನಾನು ಕನ್ನಡಿಯ ಮೇಲೆ ಕಾಲು ಇಟ್ಟೆನೆಂದು ನೀನು ಅನ್ನುತ್ತೀ. ಆ ಕೆಲಸವನ್ನು ತಪ್ಪಿಸಬೇಕೆಂದು ಅವನು ಯತ್ನ ಮಾಡುತ್ತಿದ್ದನು; ಆದರೆ ನಾನು ಅದನ್ನು ಅವನಿಂದ ಮಾಡಿಸಿಬಿಟ್ಟೆನು. ಇವನು ಅವನಿಂದ ಬಹಳ ಕೆಲಸ ಮಾಡಿಸಿದನು. ಅವನು ಬಹಳ ಜನರಿಂದ ಹೀಗೆ ಮಾಡಿಸಿದನು. ನಾನು ನನ್ನ ಹಲವು ಪುಸ್ತಕಗಳನ್ನು ಕಟ್ಟಿಸಬೇಕಾಗಿದೆ. ಅವನು ತನ್ನ ಗಡಿಯಾಲವನ್ನು ನೆಟ್ಟಗೆ ಮಾಡಿಸಿ ತಂದಿದ್ದಾನೆ. ಕಳ್ಳನನ್ನು ಕಡೆಗೆ ಒಬ್ಬ ಸಿಪಾಯಿಯು ನಿಲ್ಲಿಸಿದನು. ಗಡಿಯಾಲವು ನಿಂತಿದೆ. ಅದು ಸ್ವಲ್ಪ ಹೊತ್ತು ನೆಟ್ಟಗೆ ನಡೆಯುತ್ತದೆ, ಆ ಮೇಲೆ ಒಮ್ಮಿಂದೊಮ್ಮೆ ನಿಲ್ಲುತ್ತದೆ. ನಿಮ್ಮ ಗಡಿಯಾಲವನ್ನು ನೀವು ಎಲ್ಲಿ ನೆಟ್ಟಗೆ ಮಾಡಿಸಿದಿರಿ? ಗಿಡವು ಕೆಳಗೆ ಬಿತ್ತು. ಅವನು ಗಿಡವನ್ನು ಕೆಡವಿದನು. ಅವನು ಗಿಡವನ್ನು ಕೆಡವಿಸಿದನು. ನಾನು ಅವನಿಗೆ ಶಿಕ್ಷೆ ಮಾಡಿಸಿದೆನು. ನೀನು ಒಳ್ಳೇ ರೀತಿಯಿಂದ ನಡೆಯಬೇಕು[1], ಇಲ್ಲದಿದ್ದರೆ ನಾನು ನಿನಗೆ ಶಿಕ್ಷೆ ಮಾಡಿಸುವೆನು. ಹಾಸಿಗೆ ಇದ್ದಷ್ಟು ಕಾಲು ಚಾಚು[2]. ನ್ಯಾಯಾಧೀಶನ ಅಪ್ಪಣೆಯ ಮೇರೆಗೆ ಪೋಲೀಸ ಸಿಪಾಯಿಯು ಅವನನ್ನು ತುರಂಗದಲ್ಲಿಟ್ಟನು. ಅವನು ಸೆರೆಬಿದ್ದನು. ನಿನ್ನೆ ರಾತ್ರಿ ಅವನು ಹೋಗುವಾಗ ನೀನು ನೋಡಿದಿಯಾ? ಅವನು ಹೀಗೆ ಅನ್ನುವದನ್ನು ನಾನು ಕೇಳಿದೆನು. ಆಕೆಯ ಕಣ್ಣೊಳಗೆ ನೀರು ಬರುವದನ್ನು ನಾನು ಕಂಡೆನು. ಬೀದಿಯ ಆಚೆಯ ಬದಿಗೆ[3], ಏನೋ ಅಗಲಾಡುವದನ್ನು ನಾನು ಕಂಡೆನು. ನೀನು ಬರುವದನ್ನು ನಾನು ನೋಡಲಿಲ್ಲ. ಸೇವಕರನ್ನು ಯಾರೂ ನಂಬಬಾರದೆಂದು ಒಬ್ಬ ಗೃಹಸ್ಥನು ಅನ್ನುವದನ್ನು ನಾನು ಕೇಳಿದೆನು. ನಿನ್ನೆ ಹೊಲಿಸಿದ ಕುಪ್ಪಸವು ಏನಾಯಿತೆಂದು ಸುಭದ್ರೆಯು ತನ್ನ ತಾಯಿಯನ್ನು ಕೇಳಿದಳು.

---

1 ) You should behave well, you should conduct yourself properly. 2) Cut your coat according to your cloth, 3) On the other side of the road.

## ೧೯೭. ಶಬ್ದಸಂಗ್ರಹ ೩೧.

| | | | |
|---|---|---|---|
| A pipe | ಚಿಲಿಮೆ. | A mor-sel | ತುತ್ತು. |
| Word[1] | ಸುದ್ದಿ, ವರ್ತಮಾನ. | Qui'et-ness | ಶಾಂತಿ, ಸಮಾಧಾನ. |
| A co'lumn | ಸ್ತಂಭ, ದುಂಡು ಕಂಬ. | There-with | ಅದರಕೂಡ. |
| To e-rect | ನಿಲ್ಲಿಸು, ಕಟ್ಟು. | Strife | ಜಗಳ. |
| Wel'come | ೧ ಸುಖಪ್ರದ,೨ ಸ್ವಾಗತ. | a-bom i-na'tion | ಅಸಹ್ಯವಾಗಿರೋಣ. |
| A-vow'al | ಒಪ್ಪಿಕೊಳ್ಳೋಣ. | Be-fore'hand | ಮುಂಚಿತವಾಗಿ. |
| Bar-ren | ಬಂಜರು,ಗೊಡ್ಡು,ಬಂಜೆ. | Ways | ನಡೆನುಡಿಗಳು. |
| To dis-perse | ಚದರಿಸು. | To blus'ter | ಪ್ರಚಂಡವಾಗಿ ಬೀಸು. |
| A con'test | ವಿವಾದ, ಜಗಳ. | Gen'tle-ness | ೧ ಸೌಮ್ಯತೆ, ೨ ದಯಾಳುತನ. |
| To cast off | ಬಿಟ್ಟುಬಿಡು,ಎಸೆದುಹಾಕು. | To wrap | ೧ ಸುತ್ತು; ೨ ಮುಸುಕು ಹಾಕಿಕೊ. |
| To grasp | ಹಿಡಕೊಳ್ಳು,ತಿಳಿದುಕೊಳ್ಳು. | | |
| ಭಜಿಸು | to adore', to worship. | ಪ್ರತಿ | a co'py. |
| | | ಪ್ರಿಯ | dear. |

By-return of post — ಮರು ಟಪಾಲಿನಿಂದ.

To de-sire' (a man to do a thing) — ಇಚ್ಛೆ ತೋರಿಸು.

Good cheet — ವಿಷ್ಪಾನ್ನಗಳು, ಸಂತೋಷದಾಯಕ ಸಂಗತಿಗಳು, ಘಟನೆಗಳು.

ಕೈಖರ್ಚಿನಿಂದ — at my (your, or his) own cost.

ಚಳಿ ಬಿದ್ದದೆ — it is cold.

ಗಡದ್ದು ನಿದ್ದೆ ಹತ್ತು — to be fast a-sleep.

ನನ್ನ ಮನೆಯ ಹತ್ತರ — close to my house, not far from my house.

ಆದಷ್ಟು, ಕೈಲಾದ ಮಟ್ಟಿಗೆ — as much as one can.

ಅವನ ಹಾದಿಗೆ ಹೋಗಬೇಡ-ಗೊಡವೆಗೆ- — do not med'dle (or 'in-ter-fere') with him.

## ಭಾಷಾಂತರಪಾಠ ೩೧

೧೯೭ I *must have* my pipe *lighted*. I must have lighted my pipe. I was told to fetch a bottle of the medicine. The doctor was sent for. The general commanded the soldiers to fire. The general ordered a soldier to be shot. He sent me word.

1) ಈ ಅರ್ಥವಿರಲು ಇದರ ಹಿಂದೆ ಉಪಪದ ಬರುವದಿಲ್ಲ.

They wrote me word beforehand. The gardener did not let me pass (*or*, allow, permit, suffer me to pass) through the garden. If you cannot come, will you kindly write me word[1] by return of post? I will, or[2] I will send you word by[3] my servant. If his illness increases, the physician must be sent for. When he went to England he left his wife and children behind. The merchant *ordered* goods *to be sent* to the warehouse. Shall I carry your bag[4] sir? No get away[5]. I can carry it myself. The citizen *caused* column *to be erected* to the memory of this great man. The judge desired the prisoner to make a candid avowal of his crime. We *grow* all our vegetables in our gardan. Wheat does not grow in barren ground. The prisoners *were marched* into the next fortress. The soldiers marched out of the town. We *passed* the summer in the country and the winter in the town. The time passed very merrily. They live a cat and dog's life[6]. Better is a dry morsel and quietness therewith, than a house full of good cheer and strife. They that are of a for-ward heart are an abomination to the Lord; but such as are upright in their ways are His delight. Thou shalt worship the lord, thy God and Him only shalt thou serve.

ಅವರೊಳಗೆ ಒಬ್ಬನಾದರೂ ನನ್ನನ್ನು ದೂಷಿಸುವದನ್ನು ನಾನು ಕೇಳಲಿಲ್ಲ. ಅವರಿಗೆ ಒಳಕ್ಕೆ ಬರಲಿಕ್ಕೆ ಹೇಳಿ, ಅವರಿಂದ (ಅವನ) ಪಾಠಗಳನ್ನು ತಿರಿಗಿ ಬರಿಸು; ಯಾಕಂದರೆ ಅವುಗಳೊಳಗೆ ಬಹಳ ತಪ್ಪುಗಳುಂಟು[7]. ಅವನು ನನಗೆ ನನ್ನ ಜೀವಕ್ಕಿಂತ ಹೆಚ್ಚು ಪ್ರಿಯನು. ಯಾರಿಗಾದರೂ ತಮ್ಮ ಜೀವವು ತಮಗೆ ಬೇಕಾಗಿರುತ್ತದೆ[8]. ಈ ಕೆಲಸವನ್ನು ನಾನು ಕೈಖರ್ಚಿನಿಂದ ಮಾಡಿಸಿದೆನು. ನನಗೆ ಒಂದೇ ಪ್ರತಿ ಬೇಕು. ಈವೊತ್ತು ಬಹಳ ಚಳಿ ಬಿದ್ದದೆ. ಈವೊತ್ತು ಮಾವನಿಗೆ ಚಳಿಚಳಿಯಾಗುತ್ತದಂತೆ. ಅವನಿಗೆ ಗಡದ್ದು ನಿದ್ದೆ ಹತ್ತಿದೆ. ಈವೊತ್ತು ನಿಮಗೆ ನೆಟ್ಟಗನಿಸುತ್ತದೆಯೋ? ನನ್ನಿಂದ ಬರೋಣಾದರೆ ನಾನು ಬಂದೇನು. ನನಗೆ ತಾತ್ಯಾ[9] ಅನ್ನುತ್ತಾರೆ. ಅವನ ಮನೆ ನನ್ನ ಮನೆಯ ಹತ್ತರ ಉಂಟು. ನಿಮ್ಮಿಂದ ಆದಷ್ಟು ಮಾಡಿರಿ. ನಾನು ಅವರಿಬ್ಬರನ್ನು ನೋಡಿದೆನು. ನಾನು ಅವನನ್ನು ನೋಡಿ ಸ್ಪರ್ಶ

1) ನನಗೆ ತಿಳಿಸು. 2) ಒಮ್ಮೊಮ್ಮೆ or=otherwise, else. 3) ಸಂಗಡ. 4) ಒಜ್ಜೆ. 5) ನಡೆ, ಹೋಗು. 6) ನಾಯಿ ಬೆಕ್ಕುಗಳ ಬಾಳ್ವೆಯಂತೆ ಅವರ ಬಾಳ್ವೆ. 7) They are full of mistakes. 8) Every ones life is dear of himself. 9) Tatya.

ಸಹ ಮಾಡಿದೆನು. ಈ ಕೆಲಸದಲ್ಲಿ ನನ್ನದೇ ತಪ್ಪು ಆದೆ[1]. ಅವನು ಮಾತಾಡುವ ನಕ್ಕನು. ನಾನು ಅದನ್ನು ಮೊದಲೇ ಮಾಡಿಬಿಟ್ಟದ್ದೇನೆ. ಬಹುತರ[2] ಯಾವ ಜನರು ಸ್ವಾರ್ಥ ಬುದ್ಧಿಯವರಿರುತ್ತಾರೆ. ನನ್ನ ಕುದುರೆಗೆ ಬೆಲೆ ಬಂತು[3]. ನೀ ನೀವು ಎಷ್ಟು ಗಂಟೆಗೆ (ಮಲಗಿ) ಎದ್ದಿರಿ? ನೀವು ಬರದೆ ನಾವು ಹೋಗುವದಿ ನನ್ನ ಮನಸು ಆ ಊರಿಗೆ ಹೋಗುವದದೆ. ಕೆಲಸವು ತೀರಿದ ಬಳಿಕ ನಾ ಆಡೋಣ. ನೀವು ಇಲ್ಲಿ ಇಲ್ಲದ್ದರಿಂದ ನಾನು ಬಹಳ ದುಃಖಿತನಾಗಿದ್ದೇನೆ ಅವನು ಇರಲಿ[5]; ಅವನ ಹಾದೀ ಹಾಯಬೇಡ. ಅಲ್ಪನ ಸಂಗ ಅಭಿಮಾನ ಭಂಗ ನಾವು ದೇವರನ್ನು ನಂಬಿ ದಿನಾಲು ಆತನನ್ನು ಏಕನಿಷ್ಠೆಯಿಂದ ಭಜಿಸಿದರೆ, ಆತ ನಮ್ಮನ್ನು ಸಂಕಟ ಸಮಯದಲ್ಲಿ ಎಂದಿಗೂ ಮರೆಯನು.

# A FABLE.

## THE WIND AND THE SUN.

**The Wind and the Sun were disputing one day i winter as to which was the stronger, and they arrange to decide it in this manner. He, that first made traveller take of his mantle, was to be declared th stronger. The wind began to bluster with all his forc but the more he blustered, the closer the travelle wrapped his mantle, and the firmer he grasped it wit both his hands. Then broke forth the Sun; with hi welcome warmth he dispersed the mist and the col the traveller felt glad, and as the Sun shone warme and warmer, he at last had to cast off his mantle.**

**Thus the Sun won the contest, and proved tha gentleness is better than force.**

1) I alone am to blame in this matter. 2) Almost. 3) M horse fetched its value. 4) Unhappy. 5) Let him be alon 6) Evil company corrupts good manners.

THE END.

